**खस्सी** - **पु०** ಆಡು; ಹೋತ;—**चढ़ाना** - ಆಡನ್ನು ಬಲಿಕೊಡು.

**खाँ** - **पु०** **दे०** **खान.**

**खांखर** - **वि०** ಅನೇಕ ತೂತುಗಳುಳ್ಳ; ಟೊಳ್ಳು.

**खाँग** - **पु०** ಕೋರೆಹಲ್ಲು; ಮುಳ್ಳು.

**खांचना** - **स०** ಅಂಕಿತಗೊಳಿಸು; ಗುರುತುಮಾಡು; ಎಳೆ.

**खांचा** - **पु०** ಬುಟ್ಟಿ; ಗೂಡೆ.

**खांड** - **स्त्री०** ನಾಟಿಸಕ್ಕರೆ.

**खांडा** - **पु०** ಕತ್ತಿ.

**खांसना** - **अ०** ಕೆಮ್ಮು.

**खांसी** - **स्त्री०** ಕೆಮ್ಮಲು; ಕೆಮ್ಮು.

**खाई** - **स्त्री०** ಕಂದಕ.

**खाऊ** - **पु०** ಹೊಟ್ಟೆಬಾಕ; ತಿಂಡಿಪೋತ.

**खाक** - **स्त्री०** ಧೂಳು; ಮಣ್ಣು; ಬೂದಿ. **वि०** ತುಚ್ಛವಾದ; —**उड़ना** - ನಾಶವಾಗಿ ಹೋಗು; —**छानना** - ಬಹಳ ಹುಡುಕು; ಕಂಗೆಟ್ಟು ಅಲೆದಾಡು;—**डालना**- ಬಚ್ಚಿಡು; ಅಡಗಿಸು;—**बरसना** - ನಷ್ಟಭ್ರಷ್ಟವಾಗು; —**में मिलना** - ಮಣ್ಣುಪಾಲಾಗು.

**ख़ाकसार** - **वि०** ದೀನ; ನಮ್ರ. **पु०** ಪಂಜಾಬಿನಲ್ಲೂ ಉತ್ತರ ಹಿಂದೂಸ್ತಾನದ ಇತರ ಭಾಗಗಳಲ್ಲೂ ಸಂಗಠಿತವಾಗಿರುವ ಮುಸಲ್ಮಾನರ ಒಂದು ಸ್ವಯಂಸೇವಕದಳ.

**ख़ाका** - **पु०** ಚಿತ್ರದ ರೇಖಾಕೃತಿ; ನಕಾಶೆ; ನಕ್ಷೆ; ಕಚ್ಚಾಮಸೂದೆ; —**उतारना**, —**बनाना** - ನಕಲು ತೆಗೆ; —**उड़ाना** - ಪರಿಹಾಸ ಮಾಡು.

**ख़ाकी** - **वि०** ಮಣ್ಣಿನ ಬಣ್ಣದ; ಖಾಕಿ.

**खागना** - **अ०** ನಾಟು; ಚುಚ್ಚು.

**खाज** - **स्त्री०** ಕಜ್ಜಿ; ತುರಿ. **कोढ़ में खाज** - ದುಃಖದಮೇಲೆ ದುಃಖ.

**खाजा** - **पु०** ಕಜ್ಜಾಯ; ಒಂದು ಬಗೆಯ ಮಿಠಾಯಿ.

**खाट** - **स्त्री०** ಮಂಚ;—**खटोला** - ಬಟ್ಟೆ ಬರೆ; —**पर पड़ना** - ಕಾಯಿಲೆ ಬೀಳು;—**से लगना** - ಬಹಳ ಕಾಯಿಲೆ ಬೀಳು.

**खाड़ी** - **स्त्री०** ಆಖಾತ; ಕೊಲ್ಲಿ.

**खात** - **पु०** ಕೊಳ; ಬಾವಿ; ಗುಂಡಿ.

**ख़ातमा** - **पु०** ಸಮಾಪ್ತಿ; ಮರಣ.

**खाता** - **पु०** ಧಾನ್ಯಕೂಡಿಡುವಗುಂಡಿ; ಖಾತೆಕಿರ್ದಿ; ವಿಭಾಗ;—**खोलना** - ಹೊಸ ಸಂಬಂಧವನ್ನು ಸ್ಥಾಪಿಸು; —**डालना** - ಲೇವಾದೇವಿಯನ್ನು ಆರಂಭಿಸು.

**ख़ातिर** - **स्त्री०** ಸಮ್ಮಾನ; ಗೌರವ. **अव्य०** ಓಸ್ಕರ; ಸಲುವಾಗಿ; —**तवाज़ा** - ಮೇಜವಾನಿ ಮಾಡುವುದು, ಅತಿಥಿ ಸತ್ಕಾರ.

**ख़ातिरख़ाह** - **क्रि०** ಇಚ್ಛಾನುಸಾರ; ಯಥೇಚ್ಛವಾಗಿ.

ख़ातिरजमा - स्त्री० ಆನಂದ.
ख़ातिरदारी - स्त्री० ಆದರಸತ್ಕಾರ.
ख़ातिरी - स्त्री० ಸತ್ಕಾರ.
खाती - स्त्री० ಗುಳಿ. पु० ಬಡಗಿ.
ख़ातून - स्त्री० ಭದ್ರಮಹಿಳೆ.
खाद - स्त्री० ಗೊಬ್ಬರ.
खादर - पु० ಕೆರೆಬಳಿಯ ಪ್ರದೇಶ; ಗೋಚರಾವಿನ ಭೂಮಿ.
ख़ादिम - पु० ಸೇವಕ.
खादी - स्त्री० ಕೈನೂಲಿನ ಬಟ್ಟೆ.
खाद्य - वि० ತಿನ್ನಲು ಯೋಗ್ಯವಾದ; ಭಕ್ಷ್ಯ.
खान - पु० ಭೋಜನ. स्त्री० ಗಣಿ; ಖನಿ; ಭಂಡಾರ;—पान - ಊಟ ಉಪಚಾರ.
ख़ान - पु० ಸರದಾರ; ಪಠಾಣರ ಬಿರುದು;—ख़ाना - ಸರದಾರರ ಸರದಾರ.
ख़ानक़ाह - पु० ಮುಸಲ್ಮಾನರ ಮಠ.
ख़ानख़ाना - पु० ಸರದಾರರ ಸರದಾರ.
ख़ानख़ाह - पु० दे० ख़ाहमख़ाह.
ख़ानगी - वि० ಸ್ವಂತದ; ಖಾಸಗಿ. स्त्री० ವೇಶ್ಯೆ; ಸೂಳೆ.
ख़ानज़ादा - पु० ಶ್ರೀಮಂತನ ಮಗ.
ख़ानदान - पु० ವಂಶ; ಕುಟುಂಬ; ಮನೆತನ.
ख़ानदानी - स्त्री० ವಂಶಪಾರಂಪರ್ಯ ವಾಗಿಬಂದ; ಪೈತೃಕ.
खानपान - पु० ಊಟ ಉಪಚಾರ; ಅನ್ನ ನೀರು.
ख़ानबहादुर - पु० ಮುಸಲ್ಮಾನರಿಗೆ ಬ್ರಿಟಿಶ್ ಸರಕಾರದಿಂದ ಸಿಕ್ಕಿದ್ದ ಒಂದು ಬಿರುದು.
ख़ानम - स्त्री० दे० ख़ातून.
ख़ानसामाँ - पु० ಉಗ್ರಾಣದಲ್ಲಿ ಕೆಲ ಸಮಾಡುವವ; ಅಡಿಗೆಯವ.
खाना - स० ಊಟಮಾಡು; कचा खा जाना - ಜೀವತಿನ್ನು; खाने दौड़ना - ಸಿಟ್ಟಿಗೇಳು.
ख़ाना - पु० ಮನೆ; ಮಂದಿರ; ಸ್ಥಾನ; ಅಂಕಣ; ಅರೆ.
ख़ाना-ख़राब - वि० ದಿಕ್ಕೆಟ್ಟವ.
ख़ाना-जंगी - स्त्री० ಗೃಹಕಲಹ.
ख़ाना-ज़ाद - पु० ಮನೆಯ ಆಳು.
खाना-तलाशी - स्त्री० ಮನೆಯ ಝಡತಿ.
ख़ाना-पुरी - स्त्री० ಕೋಷ್ಟಕ.
ख़ाना-बदोश - वि० ಮನೆಮಾರಿಲ್ಲದೆ ತಿರುಗುವವ.
ख़ाना-शुमारी - स्त्री० ಗೃಹಗಣನೆ; ಜನಗಣತಿ.
ख़ानादारी - स्त्री० ಮನೆತನ; ಮನೆಯ ಸಮಾಚಾರ.
खाना-पीना - पु० दे० खानपान.
खानि - स्त्री० ಗಣಿ; ಉತ್ಪತ್ತಿಸ್ಥಾನ.
खानिक - पु० ಗಣಿ.
ख़ाब - पु० ಕನಸು. (ख़्वाब)

**खाबड़** - **वि०** ಹಳ್ಳತಿಟ್ಟಾದ; ತರಕಲು.

**खाम** - **पु०** ಲಕೋಟೆ; ಚೀಲ; ಜೋಡಣೆ.

**ख़ाम** - **वि०** ಪಕ್ವವಾಗದಿರುವ; ಹಸಿ; ಕಚ್ಚಾ; ಅನುಭವಹೀನ; ಕೆಟ್ಟ.

**ख़ामख़याली** - **स्त्री०** ವ್ಯರ್ಥದ ಮಾತು.

**ख़ामख़ाह** / **ख़ामख़ाही** } **क्रि० दे०** ख़्वाहम-ख़्वाह.

**ख़ामी** - **स्त्री०** ಅಪಕ್ವತೆ; ಅಪೂರ್ಣತೆ.

**ख़ामोश** - **वि०** ಮೌನವಾಗಿರುವ.

**ख़ामोशी** - **स्त्री०** ಮೌನ.

**ख़ायन** - **पु०** ಮತ್ತೊಬ್ಬರ ವಸ್ತುವನ್ನು ದುರುಪಯೋಗಮಾಡುವವ.

**ख़ाया** - **पु०** ಅಂಡಕೋಶ.

**ख़ाया-बरदारी** - **स्त्री०** ಅತ್ಯಂತ ಹೆಚ್ಚಾದ ಮುಖಸ್ತುತಿ.

**खार** - **स्त्री०** ಧೂಳು; ಬೂದಿ.

**ख़ार** - **पु०** ಮುಳ್ಳು; ಕಂಟಕ; ದ್ವೇಷ; ಮತ್ಸರ;—**खाना** - ದ್ವೇಷಿಸು;—**गुज़रना** - ಕೆಟ್ಟದೆನಿಸು.

**खारा** - **वि०** ಉಪ್ಪಾದ; ಚೌಳು.

**ख़ारिज** - **वि०** ಬಹಿಷ್ಕೃತ; ಹೊರಗೆ ಹಾಕಲ್ಪಟ್ಟ; ಬೇರೆಮಾಡಿದ.

**ख़ारिश** - **स्त्री०** ಕಜ್ಜಿ; ತುರಿ.

**खारी** - **वि०** ಕ್ಷಾರವಾದ; ಚೌಳು.

**खाल** - **स्त्री०** ತೊಗಲು; ಚರ್ಮ; ತಿದಿ; ತಗ್ಗಿನಲ್ಲಿರುವ ಜಮೀನು;—**उड़ाना या उधेड़ना** - ಚರ್ಮ ಸುಲಿದು ಹೋಗುವಂತೆ ಹೊಡೆ.

**ख़ालसा** - **वि०** ಏಕಾಧಿಕಾರವುಳ್ಳ; ಸರಕಾರಿ; ಸಿಖ್ ಜಾತಿಯ ಒಂದು ಒಳಪಂಗಡ.

**ख़ाला** - **वि०** ತಗ್ಗಾದ; ನಿಮ್ನ.

**ख़ाला** - **स्त्री०** ಚಿಕ್ಕಮ್ಮ;—**जी का घर** - ಬಹಳ ಸುಲಭವಾದ ಕಾರ್ಯ.

**ख़ालिक** - **स्त्री०** ಸೃಷ್ಟಿಕರ್ತ.

**ख़ालिस** - **वि०** ಪರಿಶುದ್ಧ; ನಿರ್ಮಲ.

**ख़ाली** - **वि०** ಬರಿದು; ರಿಕ್ತ; ಖಾಲಿ. **क्रि०** ಕೇವಲ; ಬರೇ;—**बैठना** - ಉದ್ಯೋಗವಿಲ್ಲದೆ ಕಾಲಹರಣ ಮಾಡು.

**ख़ालू** - **पु०** ತಾಯಿಯ ತಂಗಿಯ ಗಂಡ; ಚಿಕ್ಕಪ್ಪ.

**ख़ाविंद** - **पु०** ಗಂಡ; ಯಜಮಾನ.

**ख़ास** - **वि०** ವಿಶೇಷ;—**व आम** - ಜನಸಾಮಾನ್ಯಕ್ಕೆ ಸಂಬಂಧಿಸಿದ.

**ख़ासक़लम** / **ख़ासनवीस** } **पु०** ಆಪ್ತ ಕಾರ್ಯದರ್ಶಿ; ಪ್ರೈವೇಟ್ ಸೆಕ್ರೆಟರಿ.

**ख़ासकर** - **वि०** ವಿಶೇಷವಾಗಿ.

**ख़ासगी** - **वि०** ರಾಜನ ಅಥವಾ ಯಜಮಾನನ ಸ್ವಂತ; ಖಾಸಗಿ.

**ख़ासतराश** - **पु०** ರಾಜ ಮಹಾರಾಜರ ಕ್ಷೌರಿಕ; ಅರಮನೆ ಹಜಾಮ.

**ख़ासदान** - **पु०** ತಾಂಬೂಲದ ಪೆಟ್ಟಿಗೆ.

**ख़ासबरदार** - पु० ರಾಜನ ಸವಾರಿಯ ಮುಂದೆ ನಡೆಯುವ ರಾಜಭಟ.

**ख़ासमहाल** - पु० ಸರಕಾರದ ವಶದಲ್ಲಿರತಕ್ಕ ಜಮೀನ್ದಾರಿ; ಸರಕಾರಿ ಜಮೀನು.

**ख़ासा** - वि० ಉತ್ತಮ; ಸುಂದರವಾದ; ಪೂರ್ಣ.

**ख़ासियत** - स्त्री० ಪ್ರಕೃತಿ; ಸ್ವಭಾವ.

**खासिया** - स्त्री० ಆಸಾಮದೇಶದ ಕಾಡು.

**खाह** - अव्य० दे० ख्वाह.

**ख़ाहनख़ाह** / **खाहमख़ाह** - क्रि० दे० ख़्वाहमख़्वाह.

**खाहाँ** - वि० दे० ख़्वाहाँ.

**खाहिश** - स्त्री० ಅಭಿಲಾಷೆ.

**खिच** - स्त्री० ಎಳೆಯುವಿಕೆ; ಎಳೆತ.

**खिचना** - अ० ಎಳೆದುಹೋಗು; ಆಕರ್ಷಿತವಾಗು.

**खिचवाना** - स० ಎಳೆಯಿಸು.

**खिचाना** - स० दे० खिचवाना.

**खिंचाव** - पु० ಎಳೆಯುವಿಕೆ; ಎಳೆತ; ಸೆಳೆತ.

**खिंदड़ी** - स्त्री० ಚಿಂದಿಗಳಿಂದ ಹೊಲಿದ ಹಾಸಿಗೆ.

**खिचड़ी** - स्त्री० ಹುಗ್ಗಿ; ಪೊಂಗಲು.

**खिजना** - अ० ಕೋಪಿಸು; ಸಿಡಿಮಿಡಿಗೊಳ್ಳು.

**खिजलाना** - स० ಕಾಡು; ಹಿಂಸಿಸು; ರೇಗಿಸು.

**खिज़ाँ** - स्त्री० ಎಲೆಗಳು ಉದುರುವ ಕಾಲ; ಶರತ್ಕಾಲ.

**खिज़ाब** - पु० ನೆರೆಗೂದಲನ್ನು ಕಪ್ಪಗೆ ಮಾಡುವ ಮದ್ದು.

**खिज़ालत** - स्त्री० ನಾಚಿಕೆ; ಸಂಕೋಚ.

**खिझाना** - स० ಸಿಟ್ಟಿಗೆಬ್ಬಿಸುವುದು.

**खिड़की** - स्त्री० ಕಿಡಿಕಿ; ಕಿಟಿಕಿ; ಕೋಟೆಯ ಹಿಂಬಾಗಿಲು.

**ख़िताब** - पु० ಪದವಿ; ಬಿರುದು.

**ख़िताबी** - वि० ಪದವೀಧರ.

**खित्ता** - पु० ಪ್ರಾಂತ್ಯ; ದೇಶ.

**ख़िदमत** - स्त्री० ಸೇವೆ; ಶುಶ್ರೂಷೆ; —गुज़ार - ಸ್ವಾಮಿಭಕ್ತ.

**ख़िदमतगार** - पु० ಸೇವಕ.

**ख़िदमतगारी** - स्त्री० ಸೇವೆ.

**ख़िदमती** - वि० ಸೇವೆಮಾಡುವವನು; ಸೇವಾಸಂಬಂಧವಾದ.

**खिन** - पु० ಕ್ಷಣ; ನಿಮಿಷ.

**खिन्न** - वि० ಉದಾಸೀನ; ದುರ್ಮ್ಮಾನ.

**खियाना** - अ० ಸವೆದುಹೋಗು.

**खिरद** - स्त्री० ಬುದ್ಧಿ.

**खिरदमन्द** - वि० ಬುದ್ಧಿವಂತ.

**ख़िरमन** - पु० ಕಣ; ಧಾನ್ಯರಾಶಿ.

**ख़िराज** - पु० ಕಂದಾಯ.

**ख़िलअत** - स्त्री० ಬಹುಮಾನವಾಗಿ ಕೊಡತಕ್ಕ ಉಡುಗೊರೆ; ಖಿಲ್ಲತ್ತು.

**ख़िलक़त** - स्त्री० ಸೃಷ್ಟಿ; ಗುಂಪು.

**खिलखिलाना** - अ० ಜೋರಾಗಿ ನಗು.

**ख़िलत** - स्त्री० दे० ख़िलअत.

**खिलना** - अ० ಅರಳು; ವಿಕಸಿತವಾಗು; ಶೋಭಿಸು.

**ख़िलवत** - स्त्री० ಏಕಾಂತ.

**ख़िलवतख़ाना** - पु० ಸ್ಥಾನ; ಗುಪ್ತ ಭೇದಗಳಿಲ್ಲದ ಸ್ಥಳ.

**खिलवाड़** - पु० दे० **खेलवाड़**.

**खिलवाना** - स० ಊಟಮಾಡಿಸು; ತಿನ್ನಿಸು; ಅರಳಿಸು.

**खिलाई-पिलाई** - स्त्री० ಅನ್ನ ನೀರಿನ ಏರ್ಪಾಡು.

**खिलाड़** / **खिलाड़ी** } पु० ಆಟಗಾರ.

**खिलाना** - स० ಆಟವಾಡಿಸು; ಊಟಮಾಡಿಸು; ಅರಳಿಸು.

**ख़िलाफ़** - वि० ವಿಪರೀತ; ವಿರುದ್ಧ.

**ख़िलाफ़त** - स्त्री० ಖಲೀಫನ ಪದವಿ.

**खिलाल** - स्त्री० (ಇಸ್ಪೀಟು ಆಟದಲ್ಲಿ) ಪೂರಾಸೋಲು.

**खिलौना** - पु० ಆಟದಸಾಮಾನು; ಆಟಿ. **हाथ का खिलौना** - ಕೈಗೊಂಬೆ; ಸೂತ್ರದ ಗೊಂಬೆ.

**खिल्ली** - स्त्री० ಹಾಸ್ಯ; ತಮಾಷೆ; ಪಾನಪಟ್ಟಿ. पु० ಬೀಡ; — **उड़ाना** - ಹಾಸ್ಯಮಾಡು.

**खिश्त** - स्त्री० ಇಟ್ಟಿಗೆ; ಕಿಸ್ತು.

**खिसकना** - अ० ಮೆಲ್ಲಮೆಲ್ಲನೆ ಸರಿ; ಜಾರು.

**खिसकाना** - स० ಸರಿಯಿಸು; ಜಾರಿಸು.

**खिसलना** - अ० ಜಾರು; ಸರಿ.

**खिसिआना** - अ० ನಾಚಿಕೆಪಡು; ಕೋಪಿಸು.

**ख़िस्सत** - स्त्री० ಜಿಪುಣತನ, ಕೃಪಣತನ.

**खींच** - स्त्री० ಎಳೆಯುವಿಕೆ.

**खींचतान** - स्त्री० ಎಳೆದಾಟ.

**खींचना** - स० ಎಳೆ; ಜಗ್ಗು; ಹೀರು **हाथ खींचना** - ಸಹಾಯಮಾಡಲು ಹಿಂಜರಿ.

**खींचाखींची** - स्त्री० ಹಿಂದಕ್ಕೂ ಮುಂದಕ್ಕೂ ಎಳೆಯುವಿಕೆ; ಜಗ್ಗಾಟ ಮಲ್ಲಾಟ.

**खींचातानी** - स्त्री० ಎಳೆದಾಟ; ಯಾವುದಾದರೊಂದು ಮಾತಿಗೆ ಇಲ್ಲದ ಅರ್ಥವನ್ನು ಕಲ್ಪಿಸುವುದು.

**खीखर** - पु० ಒಂದು ಜಾತಿಯ ನರಿ.

**खीज** - स्त्री० ಕೋಪ; ಸಿಡಿಮಿಡಿಗೊಳ್ಳುವಿಕೆ.

**खीजना** - अ० ಕೋಪಿಸು; ಸಿಡಿಮಿಡಿಗೊಳ್ಳು.

**खीझ** - स्त्री० दे० **खीज**.

**खीझना** - अ० दे० **खीजना**.

**ख़ीमा** - पु० ಡೇರೆ.

**खीर** - स्त्री० ಪಾಯಸ; ಹಾಲು.

**खीर चटाई** - स्त्री० ಅನ್ನಪ್ರಾಶನ, ಮೊದಲನೆಯ ಸಲ ಮಕ್ಕಳಿಗೆ ಅನ್ನವನ್ನು ತಿನ್ನಿಸುವ ಹಬ್ಬ.

**खीरा** - पु० ಸೌತೆಕಾಯಿ.

**खीरी** - स्त्री० ಕೆಚ್ಚಲು.

**खील** - स्त्री० ಮುಂಡಕ್ಕಿ ; ಅರಳು.
**खीली** - स्त्री० ವಿಳೇದೆಲೆಯ ಪಟ್ಟಿ.
**खीस** - वि० ನಷ್ಟವಾದ.
**खीसना** - अ० ಹಲ್ಲು ಕಿಸಿ.
**खीसा** - पु० ಚೀಲ; ಕಿಸೆ.
**खुंदाना** - स० ಹಾರಿಸು.
**खुआरी** - स्त्री० ಅಪಮಾನ; ಅಗೌರವ.
**खुखड़ी** / **खुखरी** - स्त्री० ನೆಪಾಳಿಗಳ ಚೂರಿ; ನೂಲಿನ ಉಂಡೆ.
**खुक्ख** - वि० ಒಣ; ಶೂನ್ಯ; ಬರಿದು.
**खुगीर** - पु० ಕುದುರೆಯ ಜೀನು; **—की भर्ती** - ಅನವಸರವಾದ ಜನಸಂದಣಿ; ಅನಾವಶ್ಯಕ ವಸ್ತು ಸಂಗ್ರಹ.
**खुचर** / **खुचुर** - स्त्री० ಸುಳ್ಳುಸುಳ್ಳೇ ದೋಷಾರೋಪಣೆ ಮಾಡುವುದು.
**खुजलाना** - स० ತುರಿ; ಉಗುರಿನಿಂದ ಕೆರೆಯುವುದು.
**खुजली** - स्त्री० ತುರಿ; ನವೆ; ತೀಟಿ; ಕಜ್ಜಿ.
**खुटकना** - स० ಯಾವುದಾದರೊಂದು ವಸ್ತುವಿನ ತುದಿಯನ್ನು ಮೇಲಿಂದಮೇಲೆ ಗಿಳ್ಳುವುದು.
**खुटका** - पु० दे० खटका.
**खुटचाली** - वि० ಕೆಟ್ಟ ನಡತೆಯ; ದುರಾಚಾರಿ; ದುಷ್ಟ.
**खुट्टी** - स्त्री० ಹುಣ್ಣಿನ ಮೇಲಿನ ಹುಕ್ಕಳೆ; ಹುರುಕು.

**खुतबा** - पु० ಸ್ತುತಿ; ಪ್ರಶಂಸೆ; ರಾಜನನ್ನು ಕೊಂಡಾಡುವುದು.
**खुतूत** - पु० ಪತ್ರಗಳು. (खत का बहु०)
**खुद** - वि० ತನ್ನ; ಸ್ವಂತ; ಸ್ವಯಂ; ಖುದ್ದಾಗಿ—**ब खुद** - ತಾನೇ.
**खुदकुशी** - स्त्री० ಆತ್ಮಹತ್ಯೆ.
**खुदगरज़** - वि० ಸ್ವಾರ್ಥಿ; ಸ್ವಾರ್ಥಪರ.
**खुदगरज़ी** - स्त्री० ಸ್ವಾರ್ಥ.
**खुदना** - अ० ಅಗೆಯಲ್ಪಡು; ಕೊರೆಯಲ್ಪಡು; ಕೆತ್ತಲ್ಪಡು.
**खुदनुमा** - वि० ಜಂಭಗಾರ; ಡಾಂಭಿಕ; ಅಹಂಕಾರಿ.
**खुदपरस्त** - वि० ಜಂಭಕೊಚ್ಚುವವ; ಬಡಾಯಿ ಖೋರ.
**खुदपरस्ती** - स्त्री० ಅಹಂಕಾರ; ಅಹಂಭಾವ.
**खुदमुख्तार** - वि० ಸ್ವತಂತ್ರವಾದ.
**खुदरा** - पु० ಚಿಲ್ಲರೆ ಸಾಮಾನುಗಳು, ಚಿಲ್ಲರೆ ಪದಾರ್ಥಗಳು;—**कराना** - ಚಿಲ್ಲರೆ ಮಾಡಿಸುವುದು; **—फरोश** - ಚಿಲ್ಲರೆ ವ್ಯಾಪಾರಿ.
**खुदवाई** - स्त्री० ಅಗೆಯಿಸುವ ಕೆಲಸ; ಅಗೆಯಿಸಿದುದರಮಜೂರಿ.
**खुदवाना** - स० ಅಗೆಯಿಸು.
**खुदसर** - वि० ಯಾರ ಅಧೀನಕ್ಕೂ ಒಳಪಡದ; ಸ್ವೇಚ್ಛಾಚಾರಿ.
**खुदा** - पु० ದೇವರು;—**न ख्वास्ता** - ದೇವರುಹಾಗೆ ಮಾಡದಿರಲಿ;

—खुदा करके - ಬಹಳ ಕಷ್ಟಪಟ್ಟು ;—की मार - ದೈವಶಾಪ.

खुदाई - स्त्री० ಅಗೆಯುವಿಕೆ; ಅಗೆತ.

खुदाई-खिदमतगार - पु० ದೇವರ ಸೇವಕ; ವಾಯುವ್ಯ ಸರಹದ್ದಿನ ಪ್ರಾಂತ್ಯದ ಒಂದು ಸ್ವಯಂ ಸೇವಕದಳ.

खुदातर्स - पु० ದೈವಭೀರು.

खुदा-ताला - पु० ಈಶ್ವರ.

खुदा-दाद - वि० ದೇವರಿಂದ ಕೊಡಲ್ಪಟ್ಟ; ಈಶ್ವರದತ್ತ.

खुदा-परस्त - वि० ಭಗವಂತನನ್ನು ಪೂಜಿಸುವವ; ಉಪಾಸಕ; ಆಸ್ತಿಕ.

खुदावन्द - पु० ಒಡೆಯ; ಸ್ವಾಮಿ.

खुदा-हाफ़िज़ - पु० ಭಗವಂತನು ನಿನ್ನನ್ನು ರಕ್ಷಿಸಲಿ.

खुदी - पु० ಅಹಂಭಾವ; ಅಹಂಕಾರ; ಹೆಮ್ಮೆ.

खुद्दी - स्त्री० ಅಕ್ಕಿಯ ನುಚ್ಚು.

खुनक - वि० ಬಹಳ ತಣ್ಣಗಿರುವ; ತಂಪಾದ.

खुनकी - स्त्री० ಚಳಿ; ತಂಪು.

खुनखुना - पु० ಹುಡುಗರ ಒಂದು ಬಗೆಯ ಆಟ.

खुनस - स्त्री० ಕೋಪ; ಸಿಟ್ಟು.

खुनसाना - अ० ಕೋಪಗೊಳ್ಳು.

खुनसी - वि० ಕ್ರೋಧೀ.

खुफ़िया - वि० ಬಹಿರಂಗವಲ್ಲದ.

खुफ़िया-पुलीस - पु० ಗುಪ್ತಚರ.

खुभना - स० ಹೊಗು; ನುಗ್ಗು; ಚುಚ್ಚು.

खुभी - स्त्री० ಕರ್ಣಾಭರಣ; ಬೆಂಡೋಲೆ.

खुम - पु० ಮಡಿಕೆ;—कदा - पु० ಹೆಂಡದಂಗಡಿ.

खुमार - पु० } ಮತ್ತು; ಅಮಲು.
खुमारी - स्त्री० }

खुमी - स्त्री० ನಾಯಿಕೊಡೆ; ಹಲ್ಲಿಗೆ ಹಾಕಿಸುವ ಚಿನ್ನದವೊಳೆ; ಕೊಂಬುಕಳಶ.

खुरंड - स्त्री० ಗಾಯಒಣಗಿದಹೊಕ್ಕು.

खुर - पु० ಗೊರಸು; ಸೀಳಿದಗೊರಸು.

खुरखुरा - स्त्री० ನುಣುಪಲ್ಲದ; ಒರಟು.

खरखुराना - अ० ಗುರುಗುರೆಂದು ಸದ್ದಾಗು.

खुरचन - स्त्री० ತುರಿದು ತೆಗೆದದ್ದು; ಕೆರೆದು ತೆಗೆದದ್ದು.

खुरचना - स० ತುರಿ; ಕೆರಿ.

खुरचनी - स्त्री० ತುರಿಯುವ ಮಣೆ.

खुरचाल - स्त्री० ಕೆಟ್ಟಚಾಳಿ.

खुरचाली - वि० ನೀಚ.

खुरजी - स्त्री० ದೊಡ್ಡ ಚೀಲ; ಕುದುರೆ ಸವಾರನ ಚೀಲ.

खुरदरा - वि० ಒರಟು; ಹರಿತವಿಲ್ಲದ.

खुरपा - पु० ಹುಲ್ಲುಕೆತ್ತುವ ಪಾರೆ.

खुरमा - पु० ಒಂದು ಬಗೆಯ ಭಕ್ಷ್ಯ.

खुरशैद - पु० ಸೂರ್ಯ.

**खुराक** - स्त्री० ಆಹಾರ; ತಿಂಡಿ.
**खुराकी** - स्त्री० ಊಟಕ್ಕಾಗಿ ವೆಚ್ಚ ಮಾಡುವ ಹಣ; ಭತ್ಯ.
**खुराफ़ात** - स्त्री० ಅರ್ಥವಿಲ್ಲದ ಮಾತು; ಬೈಗಳು.
**खुरी** - स्त्री० ಗೊರಸಿನ ಗುರುತು.
**खुर्द** - वि० ಚಿಕ್ಕ; ಲಘು.
**खुर्दबीन** - स्त्री० ದುರ್ಬೀನು; ದೂರ ದರ್ಶಕ ಯಂತ್ರ.
**खुर्दबुर्द** - वि० ನಷ್ಟಭ್ರಷ್ಟವಾದ.
**खुर्दा** - पु० ಚಿಲ್ಲರೆ ವಸ್ತುಗಳು; ಹಣದ ಚಿಲ್ಲರೆ.
**खुर्दाफ़रोश** - पु० ಚಿಲ್ಲರೆ ವ್ಯಾಪಾರಿ.
**खुर्राट** - वि० ಅನುಭವಿ; ಮುದುಕ; ಯುಕ್ತಿಗಾರ.
**खुर्राटा** - पु० ಗೊರಟೆಮುಲ್ಲ.
**खुलना** - अ० ತೆರೆ; ಬಿಚ್ಚು; ಹೊರ ಪಡು. **खुलकर** - ಚೆನ್ನಾಗಿ; ನಿರ್ಭಯವಾಗಿ; ಏನೂ ತಡೆ ಯಿಲ್ಲದೆ. **खुले आम, खुले खज़ाने, खुले मैदान या खुले बाज़ार** - ಬಹಿರಂಗವಾಗಿ; ಎಲ್ಲರಮುಂದೆ.
**खुलवाना** - स० ತೆರೆಯಿಸು.
**खुला** - वि० ಪ್ರಕಟ; ಬಂಧನವಿಲ್ಲದ; ಸ್ಪಷ್ಟ.
**खुलासा** - पु० ಸಂಕ್ಷಿಪ್ತ ವಿವರಣೆ; वि० ತಡೆಯಿಲ್ಲದ.
**खुल्लमखुल्ला** - क्रि० ಬಹಿರಂಗದಲ್ಲಿ.
**खुश** - वि० ಸಂತೋಷವುಳ್ಳ; ಪ್ರಸನ್ನ; ಆನಂದಿತ.
**खुश-क़िस्मत** - वि० ಭಾಗ್ಯವಾನ್.
**खुश-क़िस्मती** - स्त्री० ಸೌಭಾಗ್ಯ.
**खुश-ख़त** - वि० ಸುಂದರವಾದ ಅಕ್ಷರ ಬರೆಯುವವನು.
**खुश-ख़बरी** - स्त्री० ಸಂತೋಷ ವಾರ್ತೆ.
**खुश-गवार** - वि० ಮನೋಹರ.
**खुश-दिल** - वि० ಪ್ರಸನ್ನಚಿತ್ತ.
**खुशनवीस** - पु० दे० खुश-ख़त.
**खुशनवीसी** - स्त्री० ಸುಂದರವಾದ ಅಕ್ಷರಗಳನ್ನು ಬರೆಯುವ ಕಲೆ.
**खुशनसीब** - वि० ಭಾಗ್ಯಶಾಲಿ.
**खुशनसीबी** - स्त्री० ಭಾಗ್ಯ.
**खुशनुमा** - वि० ಸುಂದರವಾದ.
**खुशनूदी** - स्त्री० ಪ್ರಸನ್ನತೆ.
**खुशबू** - स्त्री० ಸುಗಂಧ; ಪರಿಮಳ.
**खुशबूदार** - वि० ಸುಗಂಧಿತವಾದ.
**खुशमिज़ाज** - स्त्री० ಒಳ್ಳೆಯ ಸ್ವಭಾವದ.
**खुशरंग** - वि० ಹೊಳೆಯುವ ಬಣ್ಣ.
**खुशहाल** - वि० ಸುಖ; ಸಂಪನ್ನ.
**खुशहाली** - स्त्री० ಅನುಕೂಲಸ್ಥಿತಿ; ಉತ್ತಮವಾದ ಸ್ಥಿತಿ.
**खुशामद** - स्त्री० ಮುಖಸ್ತುತಿ.
**खुशामदी** - वि० ಹೊಗಳು ಭಟ್ಟ; **—टट्टू** - ಇತರರನ್ನು ಹೊಗಳಿ ಹೊಟ್ಟೆತುಂಬಿಕೊಳ್ಳುವವ.
**खुशी** - स्त्री० ಆನಂದ; ಸಂತೋಷ.
**खुशीखुशी** - क्रि० ಸಂತೋಷವಾಗಿ; ಸಂತೋಷದಿಂದ.

**खुश्क** - वि० ಒಣಗಿದ; ನೀರಸ.

**खुश्कसाली** - स्त्री० ಅನಾವೃಷ್ಟಿ; ಬರ.

**खुश्की** - स्त्री० ಒಣಗಿಹೋದ ಭೂಮಿ.

**खुसर** - पु० ಮಾವ.

**खुसर-फसर** - स्त्री० ಪಿಸಿಪಿಸಿಮಾತು.

**खुसरू** - पु० ಅರಸ; ಚಕ್ರವರ್ತಿ.

**खुसिया** - पु० ಅಂಡಕೋಶ.

**खुसूसन** - क्रि० ವಿಶೇಷವಾಗಿ; ವಿಶೇಷತಃ.

**खुसूसियत** - स्त्री० ವೈಶಿಷ್ಟ್ಯ.

**खूँ-खार** / **खूँ-ख़्वार** वि० ಕೊಲೆಪಾತಕ; ಘಾತಕ; ಹಿಂಸಕ; ಕ್ರೂರ.

**खूँट** - वि० ಮೂಲೆ; ಪಕ್ಕ; ತಿರುಗಣೆ ಗೂಟ.

**खूँटा** - पु० ಗೂಟ; ದೊಡ್ಡಮೊಳೆ.

**खूँटी** - स्त्री० ಚಿಕ್ಕಮೊಳೆ; ಆಣಿ.

**खूँदना** - अ० ಹಾರುತ್ತ ನೆಗೆಯುತ್ತ ಓಡು; ಚಿಮ್ಮು.

**खूँ-रेज** - वि० ಕೊಲೆಮಾಡುವವ; ಕೊಲೆಪಾತಕ.

**खूँ-रेज़ी** - स्त्री० ರಕ್ತಹರಿಸುವುದು.

**खूगर** - वि० ಅಭ್ಯಾಸದ, ಚಟವಿರುವ.

**खूझा** - पु० ಹಣ್ಣು, ಕಾಯಿಗಳಲ್ಲಿನ ಗುಂಜಿನಂತಹ ಭಾಗ.

**ख़ून** - पु० ರಕ್ತ; ನೆತ್ತರು;—**उबलना, —खौलना** - ಅತ್ಯಂತ ಕ್ರೋಧಿತನಾಗು;—**का प्यासा** - ರಕ್ತಪಿಪಾಸು;—**पीना** - ಕೊಂದುಹಾಕು;—**सफेद होना** - ದಯೆ ಅಥವಾ ಸೌಜನ್ಯವಿಲ್ಲದೆ ಹೋಗು;—**सिरपर सवार होना** - ಕೊಲ್ಲಲು ಸಿದ್ಧನಾಗು.

**ख़ून-आलूदा** - वि० ರಕ್ತದಿಂದ ತೊಯ್ದು.

**ख़ूनख़राबी** - स्त्री० ರಕ್ತಪಾತ; ಕಡಿದಾಟಬಡಿದಾಟ.

**ख़ूनख़्वार** - वि० ರಕ್ತಪಿಪಾಸು; ಭಯಂಕರ; ನಿರ್ದಯ.

**ख़ूनी** - वि० ಕೊಲೆಪಾತಕ; ಘಾತಕ.

**ख़ूब** - वि० ಒಳ್ಳೆಯ; ಉತ್ತಮವಾದ.

**ख़ूबरू** / **ख़ूबसूरत** वि० ಸುಂದರವಾದ.

**ख़ूबसूरती** - स्त्री० ಸೌಂದರ್ಯ.

**ख़ूबी** - स्त्री० ವೈಶಿಷ್ಟ್ಯ; ಒಳ್ಳೆಯ ಗುಣ; ಸೊಗಸು.

**खूराक** - स्त्री० दे० **खुराक**.

**खूरिश** - स्त्री० ಊಟ ಉಪಚಾರದ ಪದಾರ್ಥಗಳು.

**खूसट** / **खूसर** पु० ಅರಸಿಕ; ಶೂನ್ಯಹೃದಯ; ಮುದಿಹೆಗ್ಗಣ.

**खेचर** - पु० ಆಕಾಶಚಾರಿ; ನಕ್ಷತ್ರ; ಪಕ್ಷಿ; ದೇವತೆ; ಮೇಘ.

**खेटक** - पु० ಬೇಟೆ, ಹಳ್ಳಿ.

**खेड़ा** - पु० ಚಿಕ್ಕಹಳ್ಳಿ.

**खेत** - पु० ಹೊಲ; ಗದ್ದೆ; ಯುದ್ಧಭೂಮಿ;—**में काम आना** - ಯುದ್ಧದಲ್ಲಿ ಸಾಯು.

**खेतिहर** - पु० ಒಕ್ಕಲಿಗ; ರೈತ.

**खेती** - स्त्री० ಕೃಷಿ; ಬೇಸಾಯ.

**खेतीबारी** - **स्त्री०** ವಕ್ಕಲುತನ; ಜಿರಾಯತಿ ಕೆಲಸ.

**खेद** - **पु०** ದುಃಖ; ದಣಿವು; ಖಿನ್ನತೆ.

**खेदना** - **स०** ಶಿಕಾರಿಯನ್ನು ಬೆನ್ನಟ್ಟು; ಹೊಡೆದೋಡಿಸು.

**खेदा** - **पु०** ಬೇಟೆ; ಆನೆಹಿಡಿಯುವುದು; ಕೆಡ್ಡ.

**खेना** - **स०** ದೋಣಿ ನಡೆಯಿಸು; ಕಳೆ.

**खेप** - **स्त्री०** ಒಂದಾಳು ಹೊರುವ ಭಾರ; ಗಾಡಿ ಅಥವಾ ನಾವೆಯಲ್ಲಿ ಒಂದುಸಲದ ಪ್ರಯಾಣ.

**खेपना** - **स०** ಕಳೆ; ಕಾಲತಳ್ಳು.

**खेमटा** - **पु०** ಹನ್ನೆರಡು ಮಾತ್ರೆಗಳ ಒಂದು ತಾಳ.

**खेमा** - **पु०** ಶಿಬಿರ; ಗುಡಾರ.

**खेल** - **पु०** ಆಟ; ಮನೋರಂಜಕವಾದ ವ್ಯಾಯಾಮ; ಕ್ರೀಡೆ.

**खेलना** - **स०** ಆಟವಾಡು.

**खेलवाड़** - **पु०** ಕ್ರೀಡೆ; ಮನೋರಂಜಕವಾದ ಆಟ; ತಮಾಷೆ.

**खेलवाड़ी** / **खेलाड़ी** - **वि०** ಆಟಗಾರ; ವಿನೋದಶೀಲ; ಹಾಸ್ಯಪ್ರಿಯ.

**खेलौना** - **पु०** **दे०** **खिलौना.**

**खेवट** - **पु०** ಪಟೇಲನ ವಶದಲ್ಲಿರುವ ಪಟ್ಟಾದಾರರ ಖಾತೆ; ನಾವಿಕ.

**खेवनहार** - **पु०** ನಾವಿಕ; ಪಾರುಗಾಣಿಸುವವನು.

**खेवा** - **पु०** ನಾವಿಕನ ಮಜೂರಿ.

**खेवाई** - **स्त्री०** ದೋಣಿ ನಡೆಸುವಿಕೆ.

**खेसारी** - **स्त्री०** ಒಂದು ಬಗೆಯ ಬಟಾಣಿ.

**खेह** - **स्त्री०** ಧೂಳು.

**खैंचना** - **स०** **दे०** **खींचना.**

**खैयाम** - **पु०** ಡೇರೆ ಹೊಡೆಯುವವ.

**खैर** - **पु०** ಕಾಚು.

**खैर** - **स्त्री०** ಕ್ಷೇಮ; ಒಳಿತು. **अव्य०** ಚಿಂತೆಯಿಲ್ಲ; ಪರವಾಯಿಲ್ಲ; ಅಸ್ತು.

**खैर-आफ़ियत** - **स्त्री०** ಯೋಗಕ್ಷೇಮ.

**खैर-ख़्वाह** - **वि०** ಹಿತೈಷಿ.

**खैर-ख़्वाही** - **स्त्री०** ಹಿತಚಿಂತನೆ.

**खैर-मक़्दम** - **पु०** ಶುಭಾಗಮನ; ಸ್ವಾಗತ.

**खैरा** - **वि०** ಕಾಚಿನ ಬಣ್ಣದ.

**खैरात** - **स्त्री०** ಪುಣ್ಯ; ದಾನ.

**खैरियत** - **स्त्री०** ಕ್ಷೇಮ; ಕುಶಲ.

**खोंइयाँ** - **पु०** ಸೀರೆಯ ಅಂಚು.

**खोंखी** - **स्त्री०** **दे०** **खाँसी.**

**खोंचा** - **पु०** ಪಕ್ಷಿಗಳನ್ನು ಹಿಡಿಯುವ ಅಂಟುಸವರಿದ ಕೋಲು.

**खोंची** - **स्त्री०** ಭಿಕ್ಷೆ.

**खोंटना** - **स०** ಯಾವುದಾದರೂ ವಸ್ತುವನ್ನು ತುದಿಯಿಂದ ಮುರಿದುಕೊಳ್ಳು.

**खोंता** - **पु०** ಪಕ್ಷಿಗಳಗೂಡು.

**खोंसना** - **स०** ತುರುಕು; ಹೊಗಿಸು.

**खोई** - **स्त्री०** ಕಬ್ಬಿನ ಸಿಪ್ಪೆ; ಹಿಪ್ಪೆ.

**खोखला** - **वि०** ಟೊಳ್ಳು; ಪೊಳ್ಳು.

**खोगीर** - **पुं०** ಕುದುರೆಯ ಜೀನಿನ ಕೆಳಗೆ ಹಾಸುವ ಕವುದಿ; ಕೋಗೀರಿ.

**खोज** - **स्त्री०** ಹುಡುಕೋಣ; ಅನ್ವೇಷಣ; ಶೋಧನೆ; ಚಿನ್ಹೆ.

**खोजना** - **स०** ಪತ್ತೆಮಾಡು; ಹುಡುಕು.

**खोजवाना** - **स०** ಹುಡುಕಿಸು.

**खोजा** - **पुं०** ಮುಸಲ್ಮಾನ ಅರಸರ ಅಂತಃಪುರದಲ್ಲಿ ಕಾವಲಿರುವ ನಪುಂಸಕವ್ಯಕ್ತಿ; ಕೊಜ್ಜಾ; ಸೇವಕ; ಸರದಾರ; ಮಾನವಂತ.

**खोट** - **स्त्री०** ಕುಂದು; ದೋಷ; ತಪ್ಪು; ಕೆಟ್ಟತನ.

**खोटा** - **वि०** ದೂಷಿತವಾದ; ಕೆಟ್ಟ.

**खोदना** - **स०** ಅಗೆ; ತೋಡು; ಕೆತ್ತು; ಕೆಣಕು.

**खोदनी** - **स्त्री०** ಮಮ್ಮಟಿ, ಸಲಿಕೆ ಮುಂತಾದ ಅಗೆಯುವ ಆಯುಧಗಳು.

**खोदवाना** - **स०** ಅಗೆಯಿಸು.

**खोदाई** - **स्त्री०** ಅಗೆಯುವ ಕೆಲಸ; ಅಗೆದುದರ ಮಜೂರಿ.

**खोनचा** - **पुं०** ಫೇರಿಸುತ್ತುವವರ ಮಿಠಾಯಿ ಹರಿವಾಣ.

**खोना** - **स०** ಕಳಕೊಳ್ಳು; ಹಾಳುಮಾಡಿಕೊಳ್ಳು. **अ०** ಕಳೆದುಹೋಗು; ಹಾಳಾಗು.

**खोपड़ा** - **पुं०** ತಲೆಬುರುಡೆ; ಕಪಾಲ; ತೆಂಗಿನಕಾಯಿ.

**खोपड़ी** - **स्त्री०** ತಲೆಬುರುಡೆ; ತಲೆ; ಕಪಾಲ:—**चाट जाना** - ತಲೆ ಹರಟಿ ಮಾತನಾಡಿ ಸತಾಯಿಸು; —**चटकना** - ಬಹಳ ಬಿಸಿಲು, ಬಾಯಾರಿಕೆ ಅಥವಾ ನೋವಿನಿಂದ ತಲೆ ತಿರುಗು.

**खोभार** - **पुं०** ತಿಪ್ಪೆಗುಂಡಿ.

**खोम** - **पुं०** ಸಮೂಹ.

**खोय** - **स्त्री०** ಸ್ವಭಾವ.

**खोया** - **पुं०** ಹಾಲುಖೋವಾ.

**खोर** - **स्त्री०** ಇಕ್ಕಟ್ಟಾದ ಗಲ್ಲಿ; ಬೀದಿ.

**खोरा** - **पुं०** ಬಟ್ಟಲು; ಗ್ಲಾಸು. **वि०** ಕುಂಟ; ಅಂಗಭಂಗವಾಗಿರುವ.

**खोराक** - **स्त्री०** ಭೋಜನಸಾಮುಗ್ರಿ; ಆಹಾರ.

**खोराकी** - **वि०** ಹೊಟ್ಟೆಬಾಕ.

**खोरि** - **स्त्री०** ಇಕ್ಕಟ್ಟಾದ ಗಲ್ಲಿ; ದೋಷ; ಐಬು.

**खोल** - **पुं०** ಮೇಲಿನ ಆವರಣ; ದಪ್ಪನಾದ ದುಪ್ಪಟಿ.

**खोलना** - **स०** ತೆರೆ; ಬಿಚ್ಚು: ಬಹಿರಂಗಪಡಿಸು.

**खोवा** - **पुं०** ಹಾಲುಖೋವಾ.

**खोह** - **स्त्री०** ಗುಹೆ; ಕಂದರ.

**खोही** - **स्त्री०** ಎಲೆಗಳಿಂದ ಮಾಡಿದ ಕೊಡೆ; ಹೊಂಡ; ಗುಂಡಿ.

**खौफ़** - **पुं०** ಭಯ; ಹೆದರಿಕೆ.

**खौफ़-ज़दा** - **वि०** ಭಯಪಟ್ಟ; ಭಯಭೀತ.

**खौफ़-नाक** - **पु०** ಭಯಂಕರ.

**खौर** - **स्त्री०** ಗಂಧದ ಬೊಟ್ಟು; ತ್ರಿಪುಂಡ್ರ.

**खौरा** - **पु०** ಒಂದು ಜಾತಿಯ ಕಜ್ಜಿ ರೋಗ.

**खौलना** - **अ०** ಬಿಸಿಯೇರು; ಕುದಿಯು.

**खौलाना** - **स०** ಬಹಳ ಬಿಸಿಮಾಡು; ಕುದಿಸು.

**ख्यात** - **वि०** ಪ್ರಸಿದ್ಧ; ವಿದಿತವಾದ.

**ख्याति** - **स्त्री०** ಪ್ರಸಿದ್ಧಿ; ಪ್ರಖ್ಯಾತಿ.

**ख़्याल** - **पु०** ವಿಚಾರ; ಅಭಿಪ್ರಾಯ; ಜ್ಞಾಪಕ; **—करना** - ಯೋಚಿಸು; ಜ್ಞಾಪಿಸಿಕೊಳ್ಳು; **—रखना** - ಜ್ಞಾಪಕದಲ್ಲಿಡು.

**ख़्याली** - **वि०** ಕಲ್ಪಿತ; ಹುಚ್ಚಾಟದ; ಖಯಾಲಿ; **—पुलाव** - ನಡೆಯದ ಮಾತು; ಮನಸ್ಸಿನ ಮಂಡಿಗೆ.

**ख़्वाजा** - **पु०** ಯಜಮಾನ; ಮಾಲಿಕ; ಪ್ರಮುಖ; ಸುಪ್ರಸಿದ್ಧ ಪುರುಷ; ದೊಡ್ಡ ವ್ಯಾಪಾರಿ; ಮುಸಲ್ಮಾನರ ಶ್ರೇಷ್ಠ ಸಾಧು; ಅಂತಃಪುರದ ನಪುಂಸಕ ಭೃತ್ಯರು.

**ख़्वान** - **पु०** ದೊಡ್ಡ ತಟ್ಟೆ.

**ख़्वानचा** - **पु०** **दे०** **खोनचा**.

**ख़्वाब** - **पु०** ಕನಸು; ನಿದ್ರೆ; **—गाह** - **स्त्री०** ಶಯನಾಗಾರ, ಮಲಗುವ ಕೋಣೆ.

**ख़्वार** - **वि०** ಹಾಳು; ಸರ್ವನಾಶ; ತಿನ್ನುವವ.

**ख़्वारी** - **स्त्री०** ನಷ್ಟ; ತಿರಸ್ಕಾರ; ಅಪಮಾನ.

**ख़्वास्तगार** - **पु०** ಅಪೇಕ್ಷಕ; ಬಯಸುವಾತನು; ಅರ್ಜೀದಾರ.

**ख़्वाह** - **अव्य०** ಅಥವಾ; ಇಲ್ಲವಾದರೆ.

**ख़्वाहम-ख़्वाह** - **क्रि०** ಬೇಕಾಗಲಿ ಬೇಡವಾಗಲಿ; ಸುಮ್ಮಸುಮ್ಮನೆ.

**ख़्वाहाँ** - **वि०** ಅಪೇಕ್ಷಕ; ಬಯಸುವವನು; ಅನುರಾಗಿ.

**ख़्वाहिश** - **स्त्री०** ಅಭಿಲಾಷೆ; ಬಯಕೆ.

**ख़्वाहिशमंद** - **वि०** ಬಯಸುವವ; ಅಪೇಕ್ಷಕ.

## ग

**गंगा-जमनी** - **वि०** ಎರಡು ಬಣ್ಣದ; ಕಪ್ಪು ಬಿಳುಪು ಮಿಶ್ರವಾದ.

**गंगाजली** - **स्त्री०** ತೀರ್ಥಯಾತ್ರಿಗಳ ಗಂಗಾಪಾತ್ರೆ; **—उठाना** - ಗಂಗಾನದಿಯಮೇಲೆ ಆಣೆಯಿಡು.

**गंगाल** - **पु०** ನೀರಿಡುವ ದೊಡ್ಡ ಪಾತ್ರೆ; ಗಂಗಾಳ.

**गंगालाभ** - **पु०** ಮರಣ; ಸಾವು.

**गंज** - **पु०** ಒಂದುವಿಧವಾದ ರೋಗ; ತಲೆಯ ಕೂದಲು ಉದರಿಹೋಗುವ ರೋಗ. **स्त्री०** ಖಜಾನೆ; ಗುಂಪು; ಶೇಂದಿ ಅಂಗಡಿ.

**गंजन** - पुं० ತಿರಸ್ಕಾರ; ಭಂಗ.

**गंजा** - पुं० ಬೋಳು ತಲೆಯುವ.

**गंजिया** - स्त्री० ನೂಲಿನಿಂದ ಹೆಣೆದ ಹಣದ ಚೀಲ.

**गंजी** - स्त्री० ಸಮೂಹ.

**गंजीफ़ा** - पुं० ಮೂರು ಜನರು ಸೇರಿ ಆಡುವ ೯೬ ಎಲೆಗಳ ಒಂದು ಇಸ್ಪೀಟಿನ ಆಟ.

**गंजेड़ी** - वि० ಗಾಂಜಾ ತಿನ್ನುವವನು.

**गंठकटा** - पुं० ಹಣದ ಗಂಟು ಹಾರಿಸುವ ಕಳ್ಳ.

**गंठबंधन** / **गंठजोड़ा** } पुं० ವಿವಾಹಕಾಲದ ಒಂದು ಪದ್ಧತಿ; ವಿವಾಹ ಬಂಧನ.

**गंड** - पुं० ಕಪೋಲ; ಕೆನ್ನೆ.

**गंडस्थल** - पुं० ಕಪೋಲ; ಕೆನ್ನೆ.

**गंडा** - पुं० ಭೂತಪ್ರೇತಗಳ ಭಾಧೆಯನ್ನು ನಿವಾರಿಸಲು ಮಂತ್ರಿಸಿದ ನೂಲಿನ ಪಟ್ಟಿ. वि० ಲೆಕ್ಕಾಚಾರದಲ್ಲಿ ನಾಲ್ಕು ನಾಲ್ಕಾಗಿ ಎಣಿಸುವ ಕ್ರಮ.

**गंडासा** - पुं० / **गंडासी** - स्त्री० } ಹುಲ್ಲು ಸೊಪ್ಪುಗಳನ್ನು ಕೊಚ್ಚುವ ಕತ್ತಿ; ಕುಡಗೋಲು.

**गंडेरी** - स्त्री० ಕಬ್ಬಿನ ಚೂರು.

**गंदगी** - स्त्री० ಕೊಳಕು; ಕೆಟ್ಟನಾತ.

**गंदला** - वि० ಮಲಿನ; ಕೊಳಕಾದ; ಹೊಲಸಾದ.

**गंदा** - वि० ಮಲಿನ; ಅಶುದ್ಧ.

**गंदुम** - पुं० ಗೋದುವೆ; ಗೋಧಿ.

**गंदुमी** - वि० ಗೋಧುವೆ ಬಣ್ಣದ.

**गंध** - स्त्री० ಪರಿಮಳ; ಸುಗಂಧ.

**गंधवह** - पुं० ಗಾಳಿ; ಮೂಗು.

**गंधवाह** - पुं० ವಾಯು; ಗಾಳಿ.

**गंधाना** - स० ವಾಸನೆ ಅಥವಾ ನಾತ ಹುಟ್ಟಿಸು.

**गंधी** - पुं० ಪರಿಮಳ ದ್ರವ್ಯಗಳನ್ನು ಮಾರುವವನು; ಅತ್ತರು ವ್ಯಾಪಾರಿ.

**गंभीर** - वि० ಆಳವಾದ; ಗೂಢ; ಪ್ರಶಾಂತ; ಸೌಮ್ಯ.

**गँवई** - स्त्री० ಚಿಕ್ಕಹಳ್ಳಿ.

**गँवर मसला** - पुं० ಹಳ್ಳಿಗರ ಗಾದೆ; ಗ್ರಾಮ್ಯ ಲೋಕೋಕ್ತಿ.

**गँवाना** - स० ಕಳಕೊಳ್ಳು.

**गँवार** - वि० ಅಸಭ್ಯ; ಮೂರ್ಖ; ತಿಳಿಗೇಡಿ.

**गँवारी** - स्त्री० ಅಸಭ್ಯತೆ; ಮೂರ್ಖತನ; ಕುರೂಪವುಳ್ಳ.

**गँवारू** - वि० ಹಳ್ಳಿಯುವನಂಥಾ; ಕುರೂಪಿ.

**गँसना** - स० ಚೆನ್ನಾಗಿ ಬಿಗಿ; ಗಂಟಿಕ್ಕು.

**गँसीला** - वि० ಬಾಣದಂತೆ ಮೊನೆಯುಳ್ಳ; ಚುಚ್ಚುವಂತಹ.

**गई करना** - स० ಗಮನವಿಡದಿರು; ಹೋಗಗೊಡಿಸು.

**गईबहोर** - वि० ಕಳೆದುಹೋದುದನ್ನು ಹಿಂದಕ್ಕೆ ಕೊಡುವವನು ಅಥವಾ ಕೆಟ್ಟುಹೋದ ವಸ್ತುವನ್ನು ಸರಿಪಡಿಸುವವನು.

**गऊ** - स्त्री० ಹಸು ; ಆಕಳು.

**गगन** - पु० ಆಕಾಶ ;—**के फूल** - ಅಸತ್ಯವಾದ ಕೆಲಸ.

**गगनचुंबी** / **गगनभेदी** } वि० ಬಹಳ ಎತ್ತರವಾದ.

**गगरा** - पु० ಹಿತ್ತಾಳೆ, ತಾಮ್ರ ಅಥವಾ ಕಂಚಿನ ದೊಡ್ಡ ಪಾತ್ರೆ.

**गगरिया** / **गगरी** } स्त्री० ತಾಮ್ರ ; ಹಿತ್ತಾಳೆ ಅಥವಾ ಮಣ್ಣಿನ ಕೊಡ.

**गच** - पु० ಗಾರೆ ; ಗಚ್ಚು.

**गचकारी** - स्त्री० ಗಾರೆಕೆಲಸ; ಗಚ್ಚಿನ ಕೆಲಸ.

**गछपक्क** - पु० ಮರದಮೇಲೆ ಮಾಗಿದಮಾವು.

**गजगामिनी** - स्त्री० ಆನೆಯಂತೆ ನಡೆಯುವವಳು.

**गज़** - पु० ಮೂರಡಿ ಉದ್ದಳತೆ.

**गज़क** - पु० ಶೇಂದಿ ಕುಡಿದಮೇಲೆ ಬಾಯಿ ಕೆಟ್ಟು ಹೋಗದಂತೆ ನಂಜಿಕೊಳ್ಳುವ ಪದಾರ್ಥ.

**ग़ज़नफ़र** - पु० ಆಜಾನುಬಾಹು.

**गजनाळ** - पु० ಫಿರಂಗಿ.

**ग़ज़ब** - पु० ಅನರ್ಥ ; ಕೋಪ; ಅನ್ಯಾಯ; ವಿಚಿತ್ರವಾದ ಕಾರ್ಯ; —**का** - पु० ವಿಲಕ್ಷಣವಾದ; —**नाक** - वि० ಬಹಳ ಕೋಪಗೊಂಡ ; ರೇಗಿದ.

**गजर** - पु० ಬೆಳಿಗ್ಗೆ ನಿದ್ದೆಯಿಂದೆಬ್ಬಿಸುವ ಗಂಟೆ; ಝಾವಕ್ಕೆ ಒಮ್ಮೆ ಬಾರಿಸುವ ಗಂಟೆ.

**गजरा** - पु० ಮೂಲಂಗಿ ಸೊಪ್ಪು ; ಹೂವಿನ ಮಾಲೆ; ಮಣಿಕಟ್ಟಿನ ಆಭರಣ.

**ग़ज़ल** - स्त्री० ಫಾರಸಿ ಅಥವಾ ಉರ್ದೂ ಭಾಷೆಗಳ ಶೃಂಗಾರ ರಸಪೂರ್ಣವಾದ ಕವಿತೆ.

**गजारि** - पु० ಸಿಂಹ.

**गजाल** - पु० ಜಿಂಕೆ ಮರಿ.

**गजी** - पु० ಸ್ವಲ್ಪ ಅಗಲಕಿರಿದಾದ ಒರಟು ಬಟ್ಟೆ.

**गज्झा** - पु० ರಾಶಿ; ಖಜಾನೆ; ಅಂಬಾರಿ.

**गटकना** - स० ಗುಳಕ್ಕನೆನುಂಗು ; ತಿನ್ನು.

**गटगट** - पु० ಗಳಗಳನೆ ಕುಡಿಯುವಿಕೆ.

**गटपट** - स्त्री० ಪ್ರಾಣಸ್ನೇಹ.

**गट्टा** - पु० ಮಣಿಕಟ್ಟು ; ಕಾಲಿನ ಬರಡು ; ಗಂಟು ; ಬೀಜ.

**गट्ठर** - पु० ದೊಡ್ಡಮೂಟೆ ; ಹೊರೆ.

**गट्ठा** - पु० ಮೂಟೆ ; ಹೊರೆ.

**गठकटा** - वि० ಗಂಟು ಕತ್ತರಿಸಿ ಹಣವನ್ನು ಕದಿಯುವವ.

**गठजोरा** / **गठबंधन** } पु० दे० **गठजोड़ा.**

**गठन** - स्त्री० ನಿರ್ಮಾಣ ; ರಚನೆ.

**गठना** - अ० ಗಠಿಸು ; ಚೆನ್ನಾಗಿ ನಿರ್ಮಾಣವಾಗು ; ಹೊಂದಿಕೆಯಾಗು ; ಸ್ನೇಹ ಸೌಜನ್ಯವು ಬಹಳವಾಗು.

**गठरी** - **स्त्री०** ಬಟ್ಟೆಯಲ್ಲಿ ಕಟ್ಟಿದ ಮೂಟೆ; ಸಾಮಾನು ಗಂಟು; ಕೂಡಿಟ್ಟ ಧನ.

**गठवाना** } **स०** ನಿರ್ಮಾಣ ಮಾಡಿಸು;
**गठाना** } ಹೊಲಿಸು; ಜೋಡಿಸು.

**गठित** - **वि०** ನಿರ್ಮಿತವಾದ; ಹೊಂದಿಕೆಯಾದ.

**गठिबंध** - **पु०** **दे०** **गंठजोड़ा.**

**गठिया** - **स्त्री०** ಗೋಣೀಚೀಲ; ಸಂಧಿವಾತ.

**गठियाना** - **स०** ಗಂಟುಹಾಕು; ಗಂಟಿನಲ್ಲಿಡು.

**गठीला** - **वि०** ಗೆಣ್ಣುಗಳುಳ್ಳ; ಸುಂದರವಾಗಿ ನಿರ್ಮಾಣ ಹೊಂದಿದ; ಶಕ್ತಿಶಾಲಿಯಾದ; ಚುರುಕಾದ.

**गठौती** - **स्त्री०** ಅನ್ಯೋನ್ಯ ಸ್ನೇಹ.

**गड़** - **पु०** ಕಂದಕ; ಹೊಂಡ; ಪ್ರಾಕಾರ.

**गड़गड़ा** - **पु०** ಒಂದು ವಿಧವಾದ ಹುಕ್ಕ; ಗುಡುಗುಡಿ.

**गड़गड़ाना** - **अ०** ಗರ್ಜಿಸು; ಗುಡುಗುಡಾಯಿಸು; ಬಡಬಡ ಎಂದು ಒದರು.

**गड़दार** - **पु०** ಮದ್ದಾನೆಯ ಮಾವುತ.

**गड़ना** - **अ०** ನಾಟು; ಕುಸಿ; ಹೂತು ಹೋಗು; **गड़े मुर्दे उखाड़ना** - ಕಳೆದುಹೋದ ಸಂಗತಿಗಳನ್ನು ಬಾರಿಬಾರಿ ಹೇಳುವುದು.

**गड़पना** - **स०** ತಿಂದುಬಿಡು; ನುಂಗು; ಇತರರ ವಸ್ತುವನ್ನು ಅನ್ಯಾಯವಾಗಿ ವಶಪಡಿಸಿಕೊಳ್ಳು.

**गड़बड़** - **वि०** ಹಳ್ಳತಿಟ್ಟಿನ; ಅಸ್ತವ್ಯಸ್ತ; ಕ್ರಮತಪ್ಪಿದ; ಯದ್ವಾತದ್ವಾ. **स्त्री०** ಗಡಿಬಿಡಿ; ಗಲಭೆ; ಅವ್ಯವಸ್ಥೆ.

**गड़बड़ाना** - **अ०** ಗಾಬರಿಪಡು; ಅವ್ಯವಸ್ಥೆಗೀಡಾಗು.

**गड़बड़िया** - **वि०** ಅವ್ಯವಸ್ಥೆ ಮಾಡುವವನು.

**गड़बड़ी** - **स्त्री०** ಗಡಿಬಿಡಿ.

**गड़रिया** - **पु०** ಕುರುಬ.

**गड़वा** - **पु०** ನೀರು ಕಡಿಯುವ ಚಿಕ್ಕ ಪಾತ್ರೆ; ಗಡಿಗೆ.

**गड़वाना** - **स०** ಹೂಳಿಸು.

**गड़हा** - **पु०** ಹೊಂಡ; ಗುಣಿ.

**गड़ही** - **स्त्री०** ಚಿಕ್ಕಹೊಂಡ.

**गड़ा** - **पु०** ರಾಶಿ.

**गड़ाना** - **स०** ನಾಟಿಸು; ಹೂಳಿಸು.

**गड़ारी** - **स्त्री०** ಮಂಡಲಾಕೃತಿಯ ರೇಖೆ; ವೃತ್ತ; ವಲಯ.

**गडुआ** - **पु०** } ಹೂಜಿ.
**गडुवा** - **पु०** }

**गड़ेरिया** - **पु०** **दे०** **गड़रिया.**

**गड्डा** - **पु०** ಒಂದರ ಮೇಲೊಂದು ಬಿದ್ದಿರುವ ರಾಶಿ; ಎತ್ತಿನಗಾಡಿ; ನೂಲಿನಕಟ್ಟು; ದಾರದ ಉಂಡೆ.

**गड्डी** - **स्त्री०** ರಾಶಿ.

**गड्ढा** - **पु०** **दे०** **गड्हा.**

**गढंत** - **वि०** ಕಲ್ಪಿತವಾದ; ಬನಾವಟಿ. **स्त्री०** ಕಲ್ಪಿತ ಸಮಾಚಾರ; ಮನೋರಾಜ್ಯದ ಮಾತು.

**गढ़** - **पु०** ಕೋಟೆ; ಕಿಲ್ಲೆ.

**गढ़त**, **गढ़न** - **स्त्री०** ರಚನೆ; ನಿರ್ಮಾಣ; ಆಕೃತಿ.

**गढ़ना** - **स०** ಅಚ್ಚುಕಟ್ಟಾಗಿ ರೂಪಿಸು; ರಚಿಸು; ಕಪೋಲ ಕಲ್ಪಿತವಾದ ಮಾತನ್ನಾಡು; **बात गढ़ना** - ಮಾತುಗಳನ್ನು ಸೃಷ್ಟಿಸು.

**गढ़वाल** - **पु०** ಕೋಟೆಯಮಾಲಿಕ.

**गढ़ा** - **पु०** **दे०** **गड्हा.**

**गढ़ाई** - **स्त्री०** ಅಚ್ಚುಕಟ್ಟಾಗಿ ರೂಪಿಸುವ ಕೆಲಸ ಅಥವಾ ಆ ಕೆಲಸದ ಮಜೂರಿ.

**गढ़िया** - **पु०** ರೂಪಿಸುವವನು.

**गढ़ी** - **स्त्री०** ಚಿಕ್ಕಕೋಟೆ ಅಥವಾ ಕೋಟೆಯ ಹಾಗೆ ಭದ್ರವಾದ ಮನೆ.

**गढ़ैया** - **वि०** ರೂಪಿಸುವವ; ಮಾಡುವವ; ಚಿಕ್ಕಗುಳಿ.

**गण** - **पु०** ಸಮೂಹ; ಗುಂಪು; ಶ್ರೇಣಿ; ಛಂದಃಶಾಸ್ತ್ರದಲ್ಲಿ ಮೂರು ಮಾತ್ರೆಗಳ ಸಮೂಹ;—**तंत्र राज्य** - ಪ್ರಜಾತಂತ್ರರಾಜ್ಯ.

**गणक** - **पु०** ಜ್ಯೋತಿಷಿ; ಜೋಯಿಸ.

**गणन** - **पु०**, **गणना** - **स्त्री०** ಲೆಕ್ಕ; ಗಣನೆ; ಸಂಖ್ಯೆ.

**गणनीय** - **वि०** ಗಣ್ಯ; ಪ್ರಸಿದ್ಧ; ಲೆಕ್ಕಿಸತಕ್ಕ.

**गणिका** - **स्त्री०** ಸೂಳೆ.

**गणित** - **पु०** ಲೆಕ್ಕ; ಗಣಿತ ಶಾಸ್ತ್ರ.

**गण्य** - **वि०** ಗೌರವಾರ್ಹ; ಪ್ರಸಿದ್ಧ.

**गत** - **वि०** ಕಳೆದ; ತೀರಿದ; ಹಿಂದಿನ; ರಹಿತವಾದ; ಖಾಲಿ. **स्त्री०** ರೂಪ; ಆಕೃತಿ; ಪರಿಸ್ಥಿತಿ; ದೆಸೆ; ಸದ್ಗತಿ; ದುರ್ಗತಿ; ಶ್ರಾದ್ಧ.

**गतका** - **पु०** ಕೋಲು; ಲಾಠಿವರಸೆ.

**गतकुल** - **पु०** ಉತ್ತರಾಧಿಕಾರಿಯಿಲ್ಲದ ಸಂಪತ್ತು.

**गतांक** - **पु०** ಹಿಂದಿನ ಸಂಚಿಕೆ.

**गतागत** - **वि०** ಬಂದುಹೋದ.

**गति** - **स्त्री०** ಗತಿ; ಗಮನ; ಅವಸ್ಥೆ; ಸ್ಥಿತಿ; ಪ್ರವೇಶ; ರೀತಿ; ಆಧಾರ.

**गतिया** - **पु०** ತಬಲೆಗಾರ.

**गत्ता** - **पु०** ಹೊಟ್ಟೆ; ರಟ್ಟು.

**गत्ताल-खाता** - **पु०** ಗೊಡ್ಡು ಲೇವಾದೇವಿಯ ಲೆಕ್ಕಾಚಾರ; ವಸೂಲಾಗದ ಹಳೆಸಾಲದ ಲೆಕ್ಕಾಚಾರ.

**गथ** - **पु०** ಮೂಲಧನ; ಕೂಡಿಟ್ಟ ಹಣ.

**गद** - **पु०** ವಿಷ; ರೋಗ.

**गदका** - **पु०** **दे०** **गतका.**

**ग़दर** - **पु०** ವಿದ್ರೋಹ; ಬಂಡಾಯ; ದಂಗೆ.

**गदराना** - **अ०** ಫಲಾದಿಗಳು ಹಣ್ಣಾಗು; ಯೌವನದಲ್ಲಿ ಮೈತುಂಬು; ಕಣ್ಣಿನಲ್ಲಿ ಗೀಜುಕಟ್ಟು.

**गद्ला** - **वि०** ಕೊಳಚೆ ; ಕದಡಿದ.

**गदहपचीसी** - **स्त्री०** ೧೬ ರಿಂದ ೨೫ ನೆಯ ವಯಸ್ಸು; ಅಪಕ್ವ ಅನುಭವದ ವಯಸ್ಸು.

**गदहपन** - **स्त्री०** ಮೂರ್ಖತೆ; ತಿಳಿಗೇಡಿತನ.

**गदहा** - **पु०** ಕತ್ತೆ; ಗರ್ದಭ; ಮೂರ್ಖ; ವೈದ್ಯ.

**गदा** - **स्त्री०** ಗದೆ.

**गदाई** - **वि०** ತುಚ್ಛ; ಕ್ಷುದ್ರವಾದ. **स्त्री०** ಬಿಕ್ಷೆಬೇಡುವಿಕೆ.

**गदेला** - **पु०** ಹತ್ತಿ ಇಲ್ಲವೆ ಹಕ್ಕಿಯ ಗರಿಗಳಿಂದ ತಯಾರಿಸಿದ ಹೊದಿಕೆ ಅಥವಾ ಹಾಸಿಗೆ.

**गद्गद** - **क्रि०** ಅತ್ಯಧಿಕವಾದ ಸಂತೋಷ, ಪ್ರೇಮ ಅಥವಾ ಶ್ರದ್ಧೆಯಿಂದ ಕೂಡಿದ.

**गद्द** - **पु०** ಗಟ್ಟಿಯಾದ ಅಥವಾ ಅಜೀರ್ಣಕಾರಿ ಪದಾರ್ಥವನ್ನು ತಿಂದರೆ ಹೊಟ್ಟೆಯೊಳಗಾಗುವ ಭಾರ ಮತ್ತು ಸಂಕಟ.

**गद्दर** - **वि०** ಅರೆಬೆಂದ.

**गद्दा** - **पु०** ಮೆತ್ತೆ; ಹಾಸಿಗೆ.

**गद्दार** - **पु०** ಬಂಡಾಯಗಾರ; ದೊಡ್ಡ ವಿದ್ರೋಹಿ; ಕ್ರಾಂತಿಕಾರ.

**गद्दी** - **स्त्री०** ಆಸನ; ಚಿಕ್ಕಮೆತ್ತೆ; ದಿಂಬು; ಪೀಳಿಗೆ;—**नशीन** - ಸಿಂಹಾಸನದ ಮೇಲೆ ಕೂತ.

**गद्यात्मक** - **वि०** ಗದ್ಯರೂಪದಲ್ಲಿ ಬರೆಯಲ್ಪಟ್ಟ.

**गनगौर** - **स्त्री०** ಚೈತ್ರ ಶುಕ್ಲ ತದಿಗೆ.

**गनिका** - **स्त्री०** गणिका.

**ग़नी** - **वि०** ಧನವಂತ; ಹಣಗಾರ.

**ग़नीम** - **पु०** ದರೋಡೆಕಳ್ಳ; ಶತ್ರು.

**ग़नीमत** - **स्त्री०** ಕೊಳ್ಳೆಹೊಡೆದ ಹಣ; ಕಷ್ಟವಿಲ್ಲದೆ ಸಿಕ್ಕುವ ಸಂಪತ್ತು; ಬಹಳ ಸಂತೋಷದ ವಿಷಯ.

**गन्दा** - **वि०** दे० गंदा.

**गन्ना** - **पु०** ಕಬ್ಬು.

**गन्नी** - **पु०** ಗೋಣಿ; ಒಂದು ಜಾತಿಯ ಸೆಣಬು.

**गप** - **स्त्री०** ಸುಳ್ಳು ವರ್ತಮಾನ; ಗಾಳಿಸುದ್ದಿ.

**गपशप** - **स्त्री०** ಅಲ್ಲಿ ಇಲ್ಲಿಯಮಾತು; ಹರಟೆ.

**गपकना** - **स०** ಗಬಕ್ಕನೆ ನುಂಗಿಬಿಡು.

**गपड़चौथ** - **पु०** ಕೆಲಸಕ್ಕೆ ಬಾರದ ಮಾತು; ನಾಲ್ವರು ಸೇರಿಕೊಂಡು ಕೊಚ್ಚುವ ಹರಟೆ.

**गपोड़ा** - **पु०** ಅಸತ್ಯವಾರ್ತೆ; ಕಪೋಲ ಕಲ್ಪನೆ.

**गपोड़ेबाजी** - **स्त्री०** ಸುಳ್ಳುಪೊಳ್ಳು ಹರಟೆ.

**गप्प** - **स्त्री०** ಹರಟೆ.

**गप्पी** - **वि०** ಹರಟೆಹೊಡೆಯುವವ; ಹರಟೆಮಲ್ಲ.

**गप्फा** - **पु०** ದೊಡ್ಡ ಕವಳ; ದೊಡ್ಡ ತುತ್ತು; ಲಾಭ; ಫಾಯಿದೆ;—**मरना** - ದೊಡ್ಡ ತುತ್ತುನುಂಗು.

**ग़फ़ - बि०** ಗಟ್ಟಿಯಾದ; ಮಂದವಾದ.

**ग़फ़लत - स्त्री०** ಅಜಾಗರೂಕತೆ; ಪ್ರಮಾದ; ತಪ್ಪು.

**ग़फ़ीर - वि०** ಮುಚ್ಚುಮರೆ ಮಾಡುವ.

**ग़फ़ूर - पु०** ಕ್ಷಮಿಸುವವ.

**ग़फ़्फ़ार - वि०** ದಯಾಳು; ಕ್ಷಮಾಗುಣವುಳ್ಳ.

**ग़फ़्स - वि०** ದಪ್ಪನಾದ.

**ग़बन - पु०** ದ್ರವ್ಯಾಪಹಾರ; ಛಪಾವಣೆ.

**ग़बरू - वि०** ಉಕ್ಕೇರುವ ಯೌವನದ; ಟೊಣಪ; ಸರಳಸ್ವಭಾವದ.

**ग़ब्बर - वि०** ಅಹಂಕಾರಿ.

**गब्र - पु०** ಅಗ್ನಿಪೂಜಕ.

**गम - स्त्री०** ಪ್ರವೇಶ. **पु०** ದಾರಿ.

**ग़म - पु०** ಶೋಕ; ಚಿಂತೆ; ಯೋಚನೆ.

**गमक - स्त्री०** ಪರಿಮಳ; ಸುವಾಸನೆ.

**गमकना - अ०** ಸುಗಂಧಕೊಡು.

**गमकीला - वि०** ಸುವಾಸನೆಯುಳ್ಳ.

**ग़मख़ोर - वि०** ತಾಳ್ಮೆಯುಳ್ಳ.

**ग़मगीन - वि०** ದುಃಖಿತ; ಖಿನ್ನವಾದ.

**ग़मगीनी - स्त्री०** ದುಃಖ; ವಿಷಾದ.

**ग़मगुसार - वि०** ಇತರರ ದುಃಖವನ್ನು ಹೋಗಲಾಡಿಸುವ.

**गमछा - पु०** ಅಂಗವಸ್ತ್ರ.

**ग़मज़दा - वि०** ದುಃಖಿತನಾದ.

**ग़मनाक - वि०** ವಿಷಾದಕರ.

**गमला - पु०** ಹೂತೊಟ್ಟಿ.

**गमाना - स०** ಕಳಕೊಳ್ಳು.

**ग़मी - स्त्री०** ಶೋಕಾವಸ್ಥೆ; ಮೃತ್ಯು.

**ग़म्माज़ - वि०** ಚಾಡಿಖೋರ.

**गयंद - पु०** ಆನೆ.

**गया - वि०** ಹೋದ; ತೀರಿಹೋದ; **—गुज़रा या बीता -** ದುರವಸ್ಥೆಗೀಡಾದ; ನಿಕೃಷ್ಟ; ಕಳಪೆ.

**गयावाल - पु०** ಗಯಾಕ್ಷೇತ್ರದಲ್ಲಿ ಶ್ರಾದ್ಧಮಾಡಿಸುವ ಬ್ರಾಹ್ಮಣ.

**गर - पु०** ಕೊರಳು; ಕುತ್ತಿಗೆ; ವಿಷ. **अव्य०** ರೆ; **(अगर) प्रत्य०** ಯಾವುದಾದರೂ ಕೆಲಸಮಾಡುವವ; ಉದಾ: **सौदागर, कारीगर.**

**ग़रक़ - वि०** ಮುಳುಗಿಹೋದ; ಮಗ್ನವಾದ; ನಾಶವಾದ.

**ग़रक़ाब - पु०** ಮುಳುಗುವಿಕೆ.

**ग़रक़ी - स्त्री०** ಮುಳುಗುವಿಕೆ; ಮುಳುಗು; ಅತಿವೃಷ್ಟಿ; ಜವುಗುನೆಲ.

**गरगज - पु०** ಕೋಟೆಯ ಗೋಡೆಯ ಮೇಲೆ ಬಂದೂಕುಗಳನ್ನಿಡಲು ಮಾಡಿದ ಜಾಗ.

**गरचे - अव्य०** ಆದಾಗ್ಯೂ.

**गरज - पु०** ಶಬ್ದ; ಮೇಘದ ಅಥವಾ ಸಿಂಹದ ಗರ್ಜನೆ.

**ग़रज़ - स्त्री०** ಉದ್ದೇಶ; ಆವಶ್ಯಕತೆ; ಪ್ರಯೋಜನ; ಬಯಕೆ. **क्रि०** ಕೊನೆಗೆ; ಒಳ್ಳೆಯದು; ಚೆನ್ನ; **—का बावला -** ಸ್ವಾರ್ಥಸಾಧನೆ

ಗಾಗಿ ಏನು ಬೇಕಾದರೂ ಮಾಡುವವನು ;—यह कि - ಅಂದರೆ, ಅರ್ಥಾತ್, ತಾತ್ಪರ್ಯವೇನಂದರೆ ;—गाँठना - ಸ್ವಪ್ರಯೋಜನವನ್ನು ಸಾಧಿಸು; अलग़रज़ - ಒಟ್ಟಿನಲ್ಲಿ; ಸಂಕ್ಷೇಪದಲ್ಲಿ.

**गरजन** - ಪುಂ ಗರ್ಜನೆ; ತುಮುಲಧ್ವನಿ.

**ग़रज़-मन्द** - ವಿಂ ಆವಶ್ಯಕತೆಯುಳ್ಳವ; (ಏನಾದರೂ) ಬೇಕಾದವ.

**गरजना** - ಅಂ ಗರ್ಜಿಸು ; ಸಿಟ್ಟಿನಿಂದ ಕೂಗಾಡು.

**ग़रज़ी** - ವಿಂ ಸ್ವಕಾರ್ಯ ಧುರಂಧರ.

**गरदन** - ಸ್ತ್ರೀಂ ಕುತ್ತಿಗೆ; ಕೊರಳು; ಕತ್ತು ;—उठाना - ಎದುರಿಸು, ಪ್ರತಿಭಟಿಸು ; —नापना - ಅವಮಾನಪಡಿಸು ;—पर जुवा रखना - ಬಹಳ ದೊಡ್ಡ ಕೆಲಸದ ಜವಾಬ್ದಾರಿಕೆಯನ್ನು ವಹಿಸು ; —पर सवार होना - ಬೆನ್ನು ಬಿಡದಿರು; ಜವಾಬ್ದಾರಿಕೆಯು ಬಹಳ ಹೆಚ್ಚಾಗು ;—फँसना - ಸಿಲುಕಿಹೋಗು ;—मारना - ಕೊಲ್ಲು ;—हाथ में देना - ಕತ್ತಿಗೆ ಕೈಹಾಕಿತಳ್ಳು ಅಥವಾ ಅಪಮಾನಮಾಡು ;—हिलना - ಅಸಮರ್ಥತೆಯ ಸೂಚಕವಾಗಿ ತಲೆ ಅಲ್ಲಾಡಿಸು.

**गरदनियाँ** - ಸ್ತ್ರೀಂ ಕತ್ತು ಹಿಡಿದು ತಳ್ಳುವುದು; ಅರ್ಧಚಂದ್ರ ಪ್ರಯೋಗ.

**गरदनी** - ಸ್ತ್ರೀಂ ಕುತ್ತಿಗೆಯ ಪಟ್ಟಿ ; ಒಂದು ವಿಧವಾದ ಕಂಠಾಭರಣ.

**गरदा** - ಪುಂ ಧೂಳು ; ಮಣ್ಣು.

**गरदान** - ವಿಂ ಸುತ್ತಿಸುತ್ತಿ ಒಂದೇ ಕಡೆಗೆ ಬರುವವ.

**गरदिश** - ಸ್ತ್ರೀಂ ದೆಂ गर्दिश.

**गरदी** - ಸ್ತ್ರೀಂ ತಿರಗು ; ಕ್ರಾಂತಿ.

**गरदूँ** - ಪುಂ ಆಕಾಶ.

**गरनाल** - ಸ್ತ್ರೀಂ ದೊಡ್ಡ ಬಾಯಿಯ ಬಂದೂಕು.

**गरब** - ಪುಂ ದೆಂ गर्व.

**ग़रब** - ಪುಂ ಪಶ್ಚಿಮ.

**गरबा** - ಪುಂ ಗುಜರಾತಿ ಸ್ತ್ರೀಯರು ಹಾಡತಕ್ಕ ರಾಸಗೀತ; ಒಂದು ಬಗೆಯ ಗುಜರಾತು ದೇಶದ ನಾಟ್ಯ.

**गरबीला** - ವಿಂ ಅಭಿಮಾನಶಾಲಿಯಾದ; ಹೆಮ್ಮೆಯುಳ್ಳ.

**गरभ** - ವಿಂ ಗರ್ಭ; ಗರ್ವ.

**गरभाना** - ಅಂ ಗರ್ಭಿಣಿಯಾಗು; ಭತ್ತ ಗೋದಿ ಮೊದಲಾದ ಪೈರುಗಳಲ್ಲಿ ಮೊಸೆ ಹುಟ್ಟುವುದು.

**गरभी** - ವಿಂ ಅಭಿಮಾನಶಾಲಿ.

**गरम** - ವಿಂ ಬೆಚ್ಚನೆಯ; ಬಿಸಿಯಾದ; ಉಷ್ಣ; ಪ್ರಚಂಡ;—मिज़ाज गरम होना - ಸಿಟ್ಟೇಗೇಳು, ಕೋಪಿಸಿಕೊಳ್ಳು.

**गरमागरमी** - ಸ್ತ್ರೀಂ ಹುರುಪು; ಉತ್ಸಾಹ.

**गरमागरम** - पुं० ಬಿಸಿಬಿಸಿ; ತಾಜಾ; **—होना** - ಆವೇಶಗೊಳ್ಳು.

**गरमाना** - अ० ಬಿಸಿಯಾಗು; ಕೋಪವುಂಟಾಗು; ಜಂಬ ಹೆಚ್ಚಾಗು. स० ಬಿಸಿಮಾಡು; ಕುದಿಸು.

**गरमी** - स्त्री० ಉಷ್ಣತೆ; ತಾಪ; ಉರಿ; ಆವೇಶ; ಕ್ರೋಧ; ಉತ್ಸಾಹ; ಬೇಸಗೆ; ರೋಗ.

**गरल** - पुं० ಹಾವಿನ ವಿಷ.

**गराँ** - वि० ಅಮೂಲ್ಯ; ಬೆಲೆಯುಳ್ಳ.

**गराँजान** - वि० ಸಾವಿಗೆ ಸಮೀಪಿಸಿದ; ಸೋಮಾರಿ.

**गराड़ी** - स्त्री० ಗಾಲಿ; ಚಕ್ರದ ಗುರುತು.

**गरानी** - स्त्री० ಭಾರ; ಪ್ರಿಯ.

**गरारा** - वि० ಗರ್ವದಿಂದ ಕೂಡಿದ; ಪ್ರಚಂಡ; ಸಾಹಸವುಳ್ಳ.

**गरिमा** - स्त्री० ಗೌರವ; ಅಹಂಕಾರ; ಅಷ್ಟಸಿದ್ಧಿಗಳಲ್ಲಿ ಒಂದು; ಭಾರ.

**गरिष्ठ** - वि० ಸುಲಭವಾಗಿ ಜೀರ್ಣವಾಗದ; ಬಹಳ ಗಟ್ಟಿಯಾದ.

**गरी** - स्त्री० ತಿರಳು.

**गरीक** - वि० ಮುಳಗಿದ.

**गरीज़** - पुं० ಸ್ವಭಾವ.

**ग़रीब** - वि० ಬಡವ; ದೀನ; ದರಿದ್ರ; **—उल वतन** - ದೇಶಬಿಟ್ಟು ಪರದೇಶದಲ್ಲಿ ವಾಸಿಸುವ.

**ग़रीब-निवाज़** - वि० ಬಡವರಮೇಲೆ ದಯೆಯಿಡುವ.

**ग़रीब-परवर** - स्त्री० ದೀನರಕ್ಷಕ.

**गरीबाना** - वि० ಬಡವರಂತಹ.

**ग़रीबी** - स्त्री० ಬಡತನ; ಅಧೀನತೆ; ದಾರಿದ್ರ್ಯ.

**गरीयस** - वि० ಮಹಾನ್; ಮಹತ್ವಪೂರ್ಣವಾದ; ಪ್ರಬಲ.

**गरुआ** - वि० ದೊಡ್ಡ; ಭಾರವಾದ; ಗೌರವಸ್ಥ.

**गरुआई** - स्त्री० ಭಾರ; ದೊಡ್ಡಸ್ತಿಕೆ.

**गरू** - वि० ಭಾರವಾದ.

**ग़रूर** - पुं० ಗರ್ವ; ಹೆಮ್ಮೆ; ಅಭಿಮಾನ.

**ग़रूरी** - वि० ಜಂಬಕಾರ; ಅಭಿಮಾನಶಾಲಿ.

**गरेबान** - पुं० ಕತ್ತಿನಪಟ್ಟಿ; ಕೊರಳುಪಟ್ಟಿ; ಕಾಲರ್.

**गरेरना** - स० ಸುತ್ತಬಳಸು; ಮುತ್ತು.

**गरोह** - पुं० ಸಮೂಹ; ಗುಂಪು.

**गर्क** - वि० ಮಗ್ನ; ಮುಳುಗಿದ.

**ग़र्ज़** - स्त्री० दे० **ग़रज़.**

**गर्जन** - पुं० ಗರ್ಜನೆ; ಭೀಕರವಾದ ಧ್ವನಿ.

**गर्जना** - अ० दे० **गरजना.**

**गर्त** - पुं० ಮಡು; ಗುಂಡಿ; ಜಲಾಶಯ.

**ग़र्द** - स्त्री० ಧೂಳು; ಬೂದಿ; **—ख़ोरा** - ಧೂಳು ಬಿದ್ದೂ ಸಹ ಕೆಡದ.

**ग़र्द-ख़ोर** - वि० ಧೂಳಾದರೂ ಕೊಳೆ ಹತ್ತದ; ಧೂಳು ಒರೆಸುವ ಗೋಣಿತಟ್ಟು.

गर्दन - ಪು೦ ಕತ್ತು.
गर्दभ - ಪು೦ ಕತ್ತೆ.
गर्दालू - ಪು೦ ಅಲೂಬುಖಾರಾ ಹಣ್ಣು.
गर्दिश - ಸ್ತ್ರೀ೦ ಸುತ್ತು; ಪ್ರದಕ್ಷಿಣೆ.
गर्ब - ಸ್ತ್ರೀ೦ ದೇ೦ गर्व.
गर्भ - ಪು೦ ಗಬ್ಬ; ಗರ್ಭ; ಬಸಿರು.
गर्मी - ಸ್ತ್ರೀ೦ ದೇ೦ गरमी.
गर्व - ಪು೦ ಅಹಂಕಾರ.
गर्विता - ಪು೦ ನಿಜರೂಪ ಗುಣಾದಿಗಳಿಂದ ಸೊಕ್ಕಿದ ನಾಯುಕಿ.
गर्वीला - ವಿ೦ ದರ್ಪವುಳ್ಳ; ಹೆಮ್ಮೆಯಿಂದ ಕೂಡಿದ.
गर्हण - ಪು೦ ದೂಷಣೆ.
गर्हणीय - ವಿ೦ ನಿಂದನೀಯ.
गर्हित - ವಿ೦ ನಿಂದಿಸಲ್ಪಟ್ಟ.
गर्ह्य - ವಿ೦ ನಿಂದಾತ್ಮಕವಾದ.
गल - ಪು೦ ಕಂಠ; ಕೊರಳು. (गला)
गलकंबल - ಪು೦ ಗಂಗೆತೊಗಲು. (सास्ना)
गलका - ಸ್ತ್ರೀ೦ ರೋಗ, ನೋವು, ಚಾವುಟಿ.
गलगंज - ಪು೦ ಗಲಾಟೆ.
गलगंड - ಸ್ತ್ರೀ೦ ಗಂಡಮಾಲೆ, ಗಂಟಲು ರೋಗ.
गलछट - ಸ್ತ್ರೀ೦ ಜಲಜಂತುಗಳು ನೀರು ಕುಡಿಯಲು ಸಹಾಯಕವಾಗುವ ಕೆನ್ನೆಯ ಚರ್ಮ, ದವಡೆ, ಕೆನ್ನೆ.
ग़लत - ವಿ೦ ತಪ್ಪು; ಅಶುದ್ಧ; ಅಸತ್ಯ.
गल-तकिया - ಸ್ತ್ರೀ೦ ಕೆನ್ನೆದಿಂಬು.
ग़लतफ़हमी - ಸ್ತ್ರೀ೦ ತಪ್ಪು ತಿಳುವಳಿಕೆ; ಭ್ರಾಂತಿ.
ग़लतान - ವಿ೦ ಹೊರಳುವ; ತಿರುಗುವ.
ग़लती - ಸ್ತ್ರೀ೦ ತಪ್ಪು; ದೋಷ; ಮೋಸ; ಅಶುದ್ಧಿ.
गलथना - ಪು೦ ಮೇಕೆಯ ಕತ್ತಿನ ಮೊಲೆ.
गलथैली - ಸ್ತ್ರೀ೦ ಕೋತಿ ಅಥವಾ ಮಂಗಗಳ ಗಂಟಲಲ್ಲಿ ಇರುವ ಅರೆ ಅಗಿದ ಆಹಾರಗಳನ್ನು ಕೂಡಿಡುವ ಚೀಲ.
गलना - ಅ೦ ಕರಗು; ಬೇಯು; ದ್ರವರೂಪವಾಗು.
गलफाँसी - ಸ್ತ್ರೀ೦ ಫಾಸಿಯ ಶಿಕ್ಷೆ; ಗಲ್ಲಿಗೇರಿಸುವಿಕೆ.
गलबाँही - ಸ್ತ್ರೀ೦ ಕತ್ತಿನ ಸುತ್ತ ಕೈ ಹಾಕಿ ಮಾಡುವ ಆಲಿಂಗನ.
गलबा - ಪು೦ ಆಧಿಕ್ಯ; ಪ್ರಾಧಾನ್ಯತೆ.
गलमुच्छा - ಪು೦ ಗಲ್ಲಮೀಸೆ; ಕೆನ್ನೆಯ ಅಥವಾ ಗಲ್ಲದ ಮೇಲಿನ ಕೂದಲು.
गलवाना - ಸ೦ ಕರಗಿಸು.
गलसुआ - ಪು೦ ಕತ್ತಿನಬಳಿಯಬಾವು; ಕಳ್ಳಬಾವು.
गला - ಪು೦ ಕತ್ತು; ಕೊರಳು; ಕಂಠಧ್ವನಿ;—आना - ಕತ್ತು ಊದಿಕೊಳ್ಳುವುದು;—काटना - ಅನ್ಯಾಯಮಾಡು;—छूटना - ಬಿಡುಗಡೆ

ಹೊಂದು ; **गले पड़ना** - ಬೇಡವೆಂದರೂ ಪ್ರಾಪ್ತವಾಗು ; **गले मढ़ना** - ಬಲವಂತದಿಂದ ಕತ್ತಿಗೆ ಕಟ್ಟು. **गले लगाना** - ಆಲಿಂಗಿಸು.

**गलाना** - **स०** ಕರಗಿಸು; ಹಣ್ಣಾಗಿಸು.

**गलावट** - **स्त्री०** ಕರಗುವಿಕೆ.

**गलित** - **वि०** ಕರಗಿದ; ಶಿಥಿಲವಾದ; ಜೀರ್ಣವಾದ.

**गलियारा** - **पु०** ಇಕ್ಕಟ್ಟಾದ ಸಂದಿ ಅಥವಾ ಗಲ್ಲಿ.

**गली** - **स्त्री०** ಗಲ್ಲಿ ; ಬೀದಿ ; ಸಂದಿ ; ಕೇರಿ.

**गलीचा** - **पु०** ರತ್ನಗಂಬಳಿ ; ಜಮಖಾನೆ.

**ग़लीज़** - **वि०** ಕೊಳಕು ; ಅಶುದ್ಧ. **पु०** ಕೊಳೆ ; ಅಶುದ್ಧತೆ ; ಮಲ.

**गलेबाज़** - **वि०** ಚೆನ್ನಾಗಿ ಹಾಡುವವನು; ಮಧುರವಾದ ಶಾರೀರ (ಕಂಠಧ್ವನಿ) ವುಳ್ಳವನು.

**गल्प** - **स्त्री०** ಹರಟೆ; ಜಂಭ; ಮಿಥ್ಯಾ ಪ್ರಲಾಪ ; ಸಣ್ಣ ಕತೆ.

**गल्ला** - **पु०** ಸದ್ದು ; ಗುಲ್ಲು ; ಬೊಬ್ಬೆ; ಗಲಾಟೆ ; ಸಮೂಹ ; ಗುಂಪು.

**ग़ल्ला** - **पु०** ಧಾನ್ಯ ; ಕಾಳು ; ಬೆಳೆ ; ಅಂಗಡಿಯಲ್ಲಿ ದಿನಗಟ್ಟಳೆಯ ವ್ಯಾಪಾರದಿಂದ ಸಿಕ್ಕುವ ಹಣ ; ಧನರಾಶಿ.

**गँव** - **स्त्री०** ಹೊಂಚು. (**घात**) ಪ್ರಯೋಜನ ; ಉದ್ದೇಶ್ಯವು ಫಲಿಸುವ ಸಂದರ್ಭ ;—**से** ಸಮಯ ನೋಡಿ.

**गवाक्ष** - **पु०** ಚಿಕ್ಕ ಕಿಟಕಿ ; ಗವಾಕ್ಷಿ.

**गवारा** - **वि०** ಅನುಕೂಲವಾದ ; ಮನ ವೊಪ್ಪುವ.

**गवास** - **पु०** ಕಟುಕ. (**कसायी**)

**गवाह** - **पु०** ಸಾಕ್ಷಿಗಾರ.

**गवाही** - **स्त्री०** ಸಾಕ್ಷ್ಯ.

**गवेषणा** - **स्त्री०** ಅನ್ವೇಷಣ ; ಹುಡುಕೋಣ ; ಶೋಧನೆ.

**गवैया** - **पु०** ಗಾಯಕ ; ಸಂಗೀತಗಾರ ; ಗವಾಯಿ.

**गव्य** - **वि०** ಆಕಳಿಂದ ಪ್ರಾಪ್ತವಾದ. (ಪಂಚಗವ್ಯ)

**ग़श** - **पु०** ಸ್ಮೃತಿಹೀನತೆ; ಮೂರ್ಛೆ.

**ग़श्त** - **पु०** ಸುತ್ತುವಿಕೆ ; ತಿರುಗಾಡುವಿಕೆ.

**ग़श्ती** - **वि०** ಸುತ್ತುವವನು ; ಗಸ್ತೀ ತಿರುಗುವವನು. **स्त्री०** ವ್ಯಭಿಚಾರಿಣಿ ;—**प्याला** - ರೋಲಿಂಗ್ ಕಪ್ಪು.

**गश्ती-चिट्ठी** - **स्त्री०** ಸುತ್ತೋಲೆ.

**गसना** - **स०** ಬಿಗಿಸು ; ಗಂಟಿಕ್ಕು.

**गसीला** - **वि०** ಬಿಗಿದ ; ಪೋಣಿಸಿದ.

**गस्सा** - **पु०** ಗ್ರಾಸ; ಕವಳ; ತುತ್ತು.

**गहकना** - **अ०** ಬಹಳ ಆಸೆಪಡು ; ತವಕಿಸು.

**गहगह** / **गहगहा** - **वि०** ಸಂತೋಷ ಮತ್ತು ಉತ್ಸಾಹದಿಂದ ತುಂಬಿರುವ.

**गहगहाना** - **अ०** ಸಂತೋಷದಿಂದ ಹಿರಿಹಿಗ್ಗು ; ಪೈರುಪಚ್ಚೆಗಳಿಂದ ಕಂಗೊಳಿಸು ; ಚಿಗುರು.

**गहगहे** - क्रि० ಬಹಳ ಸಂತೋಷದಿಂದ; ಬಹಳ ಚೆನ್ನಾಗಿ

**गहन** - वि० ಗಂಭೀರ; ಆಳವಾದ. पु० ಆಳ; ದುರ್ಗಮವಾದ ಸ್ಥಳ; ಗ್ರಹಣ. स्त्री० ಹಿಡಿತ; ಹಟ; ಜಿದ್ದು; ಆಭರಣ.

**गहना** - स्त्री० ಆಭರಣ. स० ಹಿಡಿದುಕೊಳ್ಳು; ಧರಿಸು.

**गहनी** - स्त्री० ಹಿಡಿತ; ಹಠ; ಹಿಡಿ.

**गहबर** - वि० ವಿಷಮ; ದುರ್ಗಮವಾದ; ವ್ಯಾಕುಲಗೊಂಡ.

**गहर** - स्त्री० ವಿಳಂಬ; ತಡ.

**गहरा** - वि० ಆಳವಾದ; ಗಂಭೀರ; ಅತ್ಯಧಿಕ; ಪ್ರಚಂಡವಾದ; —**हाथ मारना** ಯಥೇಷ್ಟವಾಗಿ ಹಣಗಳಿಸು.

**गहराई** - स्त्री० ಆಳ; ಗಾಂಭೀರ್ಯ.

**गहराना** - अ० ಆಳವಾಗು; ಕೋಪಗೊಳ್ಳು. स० ಆಳಮಾಡು.

**गहल** - पु० ಗೊಂಚಲು.

**गहलौत** - पु० ರಾಜಪೂತ ಕ್ಷತ್ರಿಯರ ಒಂದು ವಂಶ.

**गहवारा** - पु० ಮಂಚ, ಉಯ್ಯಾಲೆ.

**गहिरा** - वि० दे० **गहरा**.

**गहिराई** - स्त्री० दे० **गहराई**.

**गह्वर** - पु० ಅಂಧಕಾರಮಯವಾದ ಸ್ಥಳ; ಗುಹೆ; ಕಂದರ; ಬಿಲ; ಗುಪ್ತಸ್ಥಳ; ಅರಣ್ಯ; ಉದ್ಯಾನ; ವನ.

**गाँछना** - स० ಪೋಣಿಸು.

**गांज** - पु० ಕುಪ್ಪೆ; ರಾಶಿ.

**गांजना** - स० ರಾಶಿಮಾಡು.

**गाँजा** - पु० ಗಾಂಜಾ.

**गाँठ** - स्त्री० ಗಂಟು; ಮೂಟೆ; ಗಣಲು; ಗೆಣ್ಣು; ಕೊಣಿಕೆ; ವೈಮನಸ್ಯ; —**का पूरा** - ಧನವಂತ; —**कट** - ಜೇಬುಕಳ್ಳ.

**गाँठगोभी** - स्त्री० ಕೋಸುಗೆಡ್ಡೆ; ಹೂಕೋಸು.

**गाँठना** - स० ಗಂಟಿಕ್ಕು; ಜೋಡಿಸು; **मतलब गाँठना** - ಪ್ರಯೋಜನವನ್ನು ಹೊಂದು; ಕಾರ್ಯಲಾಭವನ್ನು ನೋಡಿಕೊಳ್ಳು.

**गाँड़** - स्त्री० ಕುಂಡಿ; ಕುಂಡೆ; ಮುಕುಳಿ.

**गाँडा** - पु० ಮರದ ತುಂಡು.

**गाँडू** - वि० ಅಂಜುಬುರುಕ; ಹೇಡಿ.

**गाँथना** - स० ಪೋಣಿಸು; ದೂರದೂರ ಹೊಲಿಗೆಹಾಕು.

**गाँधी** - पु० ಗಂದಿಗೆ ಅಂಗಡಿಯುವ; ಗುಜರಾತಿನಲ್ಲಿ ವೈಶ್ಯರ ಒಂದು ಜಾತಿ.

**गाँभीर्य** - स्त्री० ಗಂಭೀರತೆ; ಧೀರತನ.

**गाँवँ** / **गाँव** - पु० ಹಳ್ಳಿ; ಗ್ರಾಮ.

**गांस** - स्त्री० ಬಂಧನ; ತಡೆ; ದ್ವೇಷ; ರಹಸ್ಯ; ಗಂಟು; ಉರುಲು; ಬಾಣ ಅಥವಾ ಬರ್ಛಿಯಮೊನೆ.

**गाँसना** - स० ಚುಚ್ಚು; ನಾಟಿಸು; ವಶದಲ್ಲಿ ಇಟ್ಟುಕೊಳ್ಳು; ತುರುಕು.

**गाँसी** - स्त्री० ಬಾಣದ ತುದಿಮೊನೆ.

**गाँहक** - पु० दे० **गाहक.**

**गागर** / **गागरी** - स्त्री० ಗಡಿಗೆ; ಬಿಂದಿಗೆ.

**गाछ** - पु० ಮರ; ಗಿಡ. (पेड़)

**गाछी** - स्त्री० ತೋಟ; ಉದ್ಯಾನ ವನ.

**गाज** - स्त्री० ಗರ್ಜನೆ; ಸಿಡಿಲು; ಗುಡುಗು. **पर गाज गिरना** - ಸಂಕಟ ಒದಗು; ನಾಶವಾಗು.

**गाजना** - अ० ಗರ್ಜಿಸು; ಹುಂಕಾರ ಮಾಡು; ಕಿರಚು; ಆನಂದ ಪಡು.

**गाजर** - स्त्री० ಕೆಂಪು ಮೂಲಂಗಿ; ಗಾಜರು; **—मूली समझना** - ತುಚ್ಛವಾಗಿಲೆಕ್ಕಿಸು.

**ग़ाज़ा** - पु० ಮುಖಕ್ಕೆ ಹಚ್ಚಿಕೊಳ್ಳುವ ಒಂದು ಬಗೆಯ ಪುಡಿ.

**गाजाबाजा** - पु० ವಾದ್ಯಗಳ ಘೋಷ; ಕೋಲಾಹಲ; ಗದ್ದಲ.

**ग़ाज़ी** - पु० ಧರ್ಮಕ್ಕಾಗಿ ಕಾದಾಡುವ ವೀರಪುರುಷ.

**गाटा** - पु० ಚಿಕ್ಕ ಹೊಲ.

**गाड़** - स्त्री० ಕುಣಿ; ಹಳ್ಳ; ಹಗೇವು.

**गाड़ना** - स० ಹೂಳು; ಹೂತಿಡು; ನೆಡು; ಅಡಗಿಸು.

**गाड़र** - स्त्री० ಹೆಣ್ಣು ಕುರಿ.

**गाड़ा** - पु० ಬಂಡಿ; ಎತ್ತಿನಗಾಡಿ.

**गाड़ी** - स्त्री० ಬಂಡಿ; ಗಾಡಿ; ಶಕಟ

**गाढ़** - वि० ಬಹಳ; ಅಧಿಕ; ಗಟ್ಟಿ; ಆಳ; ಕಠಿಣ; ದಪ್ಪ. पु० ಆಪತ್ತು; ಸಂಕಟ.

**गाढ़ा** - वि० ದಪ್ಪ; ಮಂದ; ಗಾಢವಾದ; ಘನಿಷ್ಟ; ಪ್ರಚಂಡ; **गाढ़ी छानना** - ಚೆನ್ನಾಗಿ ಭಂಗಿ ಕುಡಿ; ಗಾಢವಾದ ಸ್ನೇಹವುಂಟಾಗು. **गाढ़े में पड़ना** - ಕಷ್ಟದಲ್ಲಿ ಸಿಕ್ಕಿಕೊಳ್ಳುವುದು.

**गात** - पु० ಅಂಗ; ಶರೀರ; ಗರ್ಭ.

**गाता** - पु० ಹಾಡುವವನು.

**गाती** - स्त्री० ಮೇಲು ವಸ್ತ್ರ; ಕೊರಳಿಗೆ ಸುತ್ತಿಕೊಳ್ಳುವ ಬಟ್ಟೆ.

**गात्र** - पु० ಶರೀರ.

**गाथा** - स्त्री० ವೃತ್ತಾಂತ; ಸ್ತುತಿ.

**गाद** - स्त्री० ಗಸಿ; ಬಗ್ಗಡ.

**गादड़** / **गादर** - वि० ಭೀರು; ಹೇಡಿ; ಮೈಗಳ್ಳ.

**गादा** - पु० ಹಸಿಧಾನ್ಯ; ಕುಯ್ಲಿಗೆ ತಯಾರಾಗದ ಫಸಲು.

**गादी** - स्त्री० दे० **गद्दी.**

**गादुर** - पु० ಬಾವಲಿ; ಗಬ್ಬಿಲ.

**गाध** - पु० ಸ್ಥಲ; ಆಳ; ನದಿಯ ಪ್ರವಾಹ.

**गान** - पु० ಗಾಯನ; ಸಂಗೀತ; ಗೀತ.

**गाना** - स० ತಾಳಸ್ವರಗಳನ್ನು ಅನುಸರಿಸಿ ಹಾಡು; ಹೊಗಳು; ವಿಸ್ತಾರವಾಗಿ ವರ್ಣಿಸು.

**ग़ाफ़िल** - वि० ಎಚ್ಚರವಿಲ್ಲದ; ಮೈಮೇಲೆ ಜ್ಞಾನವಿಲ್ಲದ; ಅಜಾಗರೂಕವಾದ.

**गाभ** - ಪುಂ ಪಶುಗಳ ಗರ್ಭ.

**गाभा** - ಪುಂ ಮುಂಚಿಗುರು; ತಳಿರು; ನವೀನ ಪಲ್ಲವ; ಮರದ ತಿರುಳು.

**गाभिन** / **गाभिनी** - ವಿಂ ಗರ್ಭಿಣಿ.

**गाम** - ಪುಂ ದೇಂ **गाँव.**

**गामी** - ವಿಂ ನಡೆಯುವವನು; ರಮಿಸುವವನು.

**गाय** - ಸ್ತ್ರೀಂ ಗೋವು; ಹಸು; ಆಕಳು; ಸರಳ ಸ್ವಭಾವದವನು.

**गायक** - ಪುಂ ಹಾಡುಗಾರ; ಸಂಗೀತಗಾರ; ಗಾಯಕ.

**गायकी** - ಸ್ತ್ರೀಂ ಹಾಡುವವಳು.

**गायकोठ** - ಸ್ತ್ರೀಂ ಗೋಶಾಲೆ.

**गायत** - ವಿಂ ಅತ್ಯಂತ; ಬಹಳ ಹೆಚ್ಚು.

**गायन** - ಪುಂ ಹಾಡುಗಾರಿಕೆ.

**ग़ायब** - ವಿಂ ಅದೃಶ್ಯ; ಲುಪ್ತ; ಮಾಯವಾದ;—**होना** - ಅದೃಶ್ಯವಾಗು; ಕಳವಾಗಿ ಹೋಗು.

**ग़ायबाना** - ಕ್ರಿಂ ತಿಳಿಯದಂತೆ; ಗೊತ್ತಾಗದಂತೆ; ರಹಸ್ಯವಾಗಿ.

**ग़ार** - ಪುಂ ಆಳವಾದ ಗುಂಡಿ; ಗುಹೆ.

**ग़ारत** - ವಿಂ ಧ್ವಂಸವಾದ; ನಾಶವಾದ; ನಷ್ಟಭ್ರಷ್ಟ.

**ग़ारद** - ಸ್ತ್ರೀಂ ಸಿಪಾಯಿಗಳ ಪಹರೆ; ಕಾವಲು.

**गारना** - ಸಂ ಹಿಂಡು; ತೆಗೆ; ತ್ಯಜಿಸು.

**गारा** - ಪುಂ ಗಚ್ಚು; ಗಾರೆ.

**गारी** - ಸ್ತ್ರೀಂ ಬೈಗಳು; ದುರ್ವಚನ.

**गारो** - ಪುಂ ಅಹಂಕಾರ; ಹೆಮ್ಮೆ.

**गार्हस्थ्य** - ಪುಂ ಗೃಹಸ್ಥಾಶ್ರಮ.

**गाल** - ಪುಂ ಕೆನ್ನೆ; ಗಲ್ಲ; ಬಾಯಿಬಡಕುತನ; ಒಂದು ಹಿಡಿ; ತುತ್ತು;—**बजाना** - ಜಂಬಕೊಚ್ಚು;—**फुलाना** - ಹೆಮ್ಮೆ ತೋರಿಸು; ಕೋಪಿಸು; ಬಡಾಯಿ ಕೊಚ್ಚು; ಹರಟೆಹೊಡಿ;—**मारना** - ಇದ್ದದ್ದು ಇಲ್ಲದ್ದು ಎಲ್ಲಾ ಸೇರಿಸಿ ಹೇಳು.

**गालगूल** - ಪುಂ ತಲೆಹರಟೆ.

**गाला** - ಪುಂ ಹತ್ತಿಯ ಹಂಜಿ.

**ग़ालिब** - ವಿಂ ವಿಜಯಿ.

**ग़ालिबन** - ಕ್ರಿಂ ಆದಮಟ್ಟಿಗೆ.

**गाली** - ಸ್ತ್ರೀಂ ಬೈಗಳು; ಕೆಟ್ಟಮಾತು.

**गाली-गलौज** - ಸ್ತ್ರೀಂ ಪರಸ್ಪರ ಬೈದಾಡುವಿಕೆ; ದುರ್ವಚನ.

**गाली-गुफ़्ता** - ಪುಂ ಬೈಗಳ ಜಗಳ.

**गालीचा** - ಪುಂ ದೇಂ **गलीचा.**

**गालू** - ವಿಂ ಜಂಬಗಾರ, ಬಡಾಯಿ ಕೊಚ್ಚುವ.

**गाव** - ಪುಂ ಗೋವು; ಎತ್ತು.

**गावकुशी** - ಸ್ತ್ರೀಂ ಗೋವಧೆ.

**गावकुर्द** - ವಿಂ ಅದೃಶ್ಯ; ನಷ್ಟಭ್ರಷ್ಟ.

**गावज़ोरी** - ಸ್ತ್ರೀಂ ಎಲ್ಲರ ಜೊತೆಗೆ ಜಗಳವಾಡ ಬೇಕೆಂಬ ಮನಸ್ಸು; ಮುಷ್ಟಾಮುಷ್ಟಿ.

**गावतकिया** - ಸ್ತ್ರೀಂ ದೊಡ್ಡದಿಂಬು.

**गावदी** - ವಿಂ ತಿಳಿಗೇಡಿ; ಮೂರ್ಖ

**गावदुम** - वि० ಎತ್ತಿನ ಬಾಲದಂತಿರುವ; ಇಳಕಲ.

**गास** - पु० ಸಂಕಟ; ಆಪತ್ತು; ತುತ್ತು; ಕವಳ.

**गाह** - पु० ಗಿರಾಕಿ; ಸ್ಥಾನ; ಮೊಸಳೆ. (ग्राह)

**गाहक** - पु० ಕೊಂಡು ಕೊಳ್ಳುವವನು; ಗ್ರಾಹಕ; ಗಿರಾಕಿ; ಅಭಿಲಾಷಿ; ಪ್ರೇಮಿ.

**गाहकी** - स्त्री० ಮಾರಾಟ; ಬಿಕರಿ.

**गाहन** - पु० ಸ್ಥಾನ.

**गाहा** - स्त्री० ವರ್ಣನೆ; ಕಥೆ; ವೃತ್ತಾಂತ. (गाथा)

**गाही** - स्त्री० ಪಂಚಕ; ಐದೈದರ ಎಣಿಕೆ.

**गाहे** - वि० ಯಾವಾಗಲಾದರೂ; —**ब-गाहे** - ಆಗಾಗ್ಯೆ.

**गिंजना** - स० ಕಿವಿಚು.

**गिंडुरी** - स्त्री० ಸುತ್ತುಕುದುರು.

**गिचपिच** / **गिचरपिचर** - वि० ಅಸ್ಪಷ್ಟವಾದ; ಗಿಜಿಗಿಜಿಯಾದ.

**ग़िज़ा** - स्त्री० ಆಹಾರ; ಪಥ್ಯ.

**ग़िज़ाल** - पु० ಪುಟ್ಟಜಿಂಕೆಮರಿ.

**गिटपिट** - स्त्री० ನಿರರ್ಥಕವಾದ ಶಬ್ದ; —**करना** - ಅಶುದ್ಧವಾಗಿ ಮಾತನಾಡು.

**गिट्टा** - पु० / **गिट्टी** - स्त्री० ಜಲ್ಲಿಕಲ್ಲಿನ ಚೂರು; ಮಣ್ಣಿನ ಪಾತ್ರೆಯ ಒಡಕಲು ಚೂರು.

**गिड़गिड़ाना** - अ० ಮಿತಿಮೀರಿದ ವಿಧೇಯತೆಯಿಂತ ಮಾತನಾಡು.

**गिद्ध** - पु० ರಣಹದ್ದು; ದೊಡ್ಡ ಜಾತಿಯ ಗಿಡುಗ.

**गिनती** - स्त्री० ಎಣಿಕೆ; ಗಣನೆ; ಲೆಕ್ಕ; ಸಂಖ್ಯೆ; —**के** - ಬಹಳ ಸ್ವಲ್ಪ; ಬಹುವಿರಳ.

**गिनना** - स० ಎಣಿಕೆಮಾಡು; ಲೆಕ್ಕ ಮಾಡು.

**गिनवाना** / **गिनाना** - स० ಎಣಿಕೆಮಾಡಿಸು; ಎಣಿಸಿಸು.

**गिन्नी** - स्त्री० ಸುತ್ತಾಟ; ಚಕ್ಕರ್ ತಿರುಗುವಿಕೆ; ಸವರನ್.

**गिर** - पु० ಗಿರಿ; ಪರ್ವತ; ಬೆಟ್ಟ.

**गिरगिट** - पु० ಗೋಸುಂಬೆ; ತೊಂಡೆ; ಕ್ಯಾತ; —**की तरह रंग बदलना** - ಕ್ಷಣಕ್ಷಣಕ್ಕೆ ತನ್ನ ಅಭಿಪ್ರಾಯಗಳನ್ನು ಬದಲಾಯಿಸಿ ಕೊಳ್ಳುವುದು.

**गिरजा** / **गिरजाघर** - पु० ಕ್ರಿಸ್ತರದೇವಾಲಯ; ಚರ್ಚ್.

**गिरदा** - पु० ಸುತ್ತು; ವಲಯ.

**गिरदाब** - पु० ಸುಳಿಗುಣಿ; ನೀರಿನ ಸುಳಿ.

**गिरना** - अ० ಬೀಳು; ಉದುರಿ ಹೋಗು; ಅವನತಿಯನ್ನು ಹೊಂದು.

**गिरफ्त** - स्त्री० ಹಿಡಿಯುವಿಕೆ; ಹಿಡಿತ.

**गिरफ्तार** - वि० ಸೆರೆಹಿಡಿಯಲ್ಪಟ್ಟ; ಬಂಧಿಸಲ್ಪಟ್ಟ; ಖೈದುಮಾಡಲ್ಪಟ್ಟ; ದಸ್ತಗಿರಿಮಾಡಲ್ಪಟ್ಟ.

**गिरफ्तारी** - स्त्री० ಬಂಧನ; ಖೈದು.

**गिरमिट** - पुं० ದೊಡ್ಡ ಬೈರಿಗೆ; ಮರದಲ್ಲಿ ತೂತುಕೊರೆಯುವ ಸಲಕರಣೆ.

**गिरवाना** - स० ಬೀಳುವಂತೆ ಮಾಡು.

**गिरवी** - वि० ಅಡವು; ಗಿರಿವಿ; ಒತ್ತೆಯಿಟ್ಟಿರುವ. (**बंधक**)

**गिरवीदार** - पुं० ಅಡವು ಇಡಿಸಿಕೊಳ್ಳುವವನು.

**गिरह** - स्त्री० ಗಂಟು; ಗೆಣ್ಣು; ಸಂಧಿ.

**गिरहकट** - वि० ಜೇಬು ಕತ್ತರಿಸುವ ಕಳ್ಳ.

**गिरहदार** - वि० ಗಂಟಿನ; ಗಂಟು ಗಂಟಾಗಿರುವ.

**गिरहबाज़** - पुं० ಒಂದು ಜಾತಿಯ ಪಾರಿವಾಳ.

**गिरहस्त** - पुं० ಗೃಹಸ್ಥ.

**गिरहस्ती** - स्त्री० ಗೃಹಕೃತ್ಯ.

**गिराँ** - वि० ಭಾರವಾದ; ಬಹಳ.

**गिरा** - स्त्री० ಮಾತನಾಡುವ ಶಕ್ತಿ; ಮಾತು; ನಾಲಿಗೆ.

**गिराना** - स० ಬೀಳಿಸು; ಪತನವಾಗುವಂತೆ ಮಾಡು.

**गिरानी** - स्त्री० ತುಟ್ಟಿಯಾಗಿರುವಿಕೆ; ಬರಗಾಲ; ಕ್ಷಾಮ.

**गिरामी** - वि० ಪೂಜ್ಯರಾದ; ಪ್ರಸಿದ್ಧರಾದ.

**गिरि** - पुं० ಪರ್ವತ; ಬೆಟ್ಟ.

**गिरी** - स्त्री० ಬೀಜದ ತಿರುಳು.

**गिरीश** - पुं० ಶಿವ; ಹಿಮಾಲಯ; ದೊಡ್ಡ ಬೆಟ್ಟ.

**गिरेबान** - पुं० ಭುಜದಮೇಲೆ ಧರಿಸುವ ಶಾಲುವಿನ ಸುತ್ತಂಚು.

**गिरो** - वि० दे० **गिरवी**.

**गिरोह** - पुं० ಸಮೂಹ; ಗುಂಪು.

**गिर्जा**, **गिर्जाघर** - पुं० ಕ್ರೈಸ್ತರ ದೇವಾಲಯ.

**गिर्द** - अव्य० ಅಕ್ಕಪಕ್ಕ; ಆಜುಬಾಜು.

**गिर्दावर** - पुं० ನಿರೀಕ್ಷಕ; ಪರೀಕ್ಷಿಸುವವ.

**गिर्दाब** - पुं० ನೀರಿನ ಸುಳಿ.

**गिल** - स्त्री० ಮಣ್ಣು; ಗಚ್ಚು; ಗಾರೆ.

**गिलकार** - पुं० ಗಾರೆ ಕೆಲಸದವನು.

**गिलकारी** - स्त्री० ಗಾರೆಯ ಕೆಲಸ.

**गिलटी** - स्त्री० ಗೆಣ್ಣು; ಸಂಧಿ.

**गिलना** - स० ಹಲ್ಲು ತಾಗಿಸದೆ ನುಂಗಿಬಿಡು; ಮನಸ್ಸಿನೊಳಗೇ ನೇ ಇಟ್ಟುಕೊಳ್ಳು.

**गिलबिला** - वि० ಬಹಳ ಮೆತ್ತಗಿರುವ; ಹಣ್ಣು ಹಣ್ಣಾದ.

**गिलबिलाना** - अ० ಅಸ್ಪಷ್ಟವಾಗಿ ಮಾತನಾಡು; ಗೊಣಗುಟ್ಟು.

**गिलम** - स्त्री० ಉಣ್ಣೆಯ ಹಾಸು ಗಂಬಳಿ; ಜಮಖಾನೆ.

**गिलहरी** - स्त्री० ಅಳಿಲು; ಅಣಿಲು.

**गिला** - पुं० ನಿಂದೆ; ದೂಷಣೆ.

**गिलाज़ात** - स्त्री० ಕೊಳೆಯಾಗುವಿಕೆ.

**गिलाफ़** - पुं० ದಿಂಬು ರಜಾಯಿ ಮುಂತಾದವುಗಳ ಚೀಲ; ಬತ್ತಳಿಕೆ; ಒರೆ.

**गिलावा** - पुं० ಗಾರೆ; ಗಿಲಾವು.

**गिलास** - पुं० ಲೋಟ; ಗ್ಲಾಸು.

**गिलोय** - स्त्री० ಗುಡುಚಿ ಬಳ್ಳಿ; ಅಮೃತಬಳ್ಳಿ.

**गिलोला** - पुं० ಕವಣೆಕಲ್ಲು.

**गिलौरी** - स्त्री० ವೀಳ್ಯದೆಲೆ ಬೀಡ; ಪಾನ್ ಪಟ್ಟಿ; ತಾಂಬೂಲ; **—दान** - ವೀಳ್ಯದತಟ್ಟೆ.

**गिल्ला** - पुं० ನಿಂದೆ; ಬೈಗಳ.

**गिल्टी** - स्त्री० दे० **गिलटी.**

**गिल्ली** - स्त्री० **गुल्ली.**

**गीं** - प्रत्य० ಪ್ರಭಾವಿತ; ಉದಾ. **गमगीं.**

**गींजना** - स० ಹಿಸುಕು; ಕಿವುಚು.

**गीत** - पुं० ಹಾಡು; ಪದ; ಗೀತ.

**गीदड़** - पुं० ನರಿ; ಶೃಗಾಲ. **वि०** ಅಂಜುಬುರುಕ; ಹೇಡಿ; **—भबकी** - ಗೊಡ್ಡು ಬೆದರಿಕೆ.

**गीदी** - वि० ಅಂಜುಬುರುಕ; ಹೇಡಿ.

**गीध** - पुं० ರಣಹದ್ದು; ಗಿಡಗ.

**गीधना** - अ० ಒಂದುಸಲ ಕಾರ್ಯ ಲಾಭವಾದುದನ್ನು ಕಂಡು ಯಾವಾಗಲೂ ಅಂತಹ ಪರಿಸ್ಥಿತಿಯನ್ನೇ ಇದಿರು ನೋಡುತ್ತಿರು.

**गीबत** - स्त्री० ಅನುಪಸ್ಥಿತಿ; ಗೈರುಹಾಜರಿ; ಚಾಡಿಹೇಳುವಿಕೆ.

**गीर** - प्रत्य० ಇಟ್ಟುಕೊಂಡಿರುವವ; ಉದಾ: **जहांगीर, अलमगीर.**

**गीला** - वि० ಒದ್ದೆಯಾಗಿರುವ; ತೊಯಿದು ಹೋಗಿರುವ.

**गुंग, गुंगा** - पुं० ಮೂಕತನ; ಮೂಗ.

**गुंगी** - स्त्री० ಇರ್ತಲೆಹಾವು; ಕುರುಡು ಹಾವು.

**गुंचा** - पुं० ಮುಗುಳು; ಮೊಗ್ಗು; ಆನಂದೋತ್ಸವ; ನೃತ್ಯ.

**गुंज, गुंजन** - स्त्री० ಭ್ರಮರಗಳ ಝೇಂಕಾರ.

**गुंजना** - अ० ಝೇಂಕರಿಸು.

**गुंजा** - पुं० ಗುಲಗುಂಜಿ; ಮಂಜಾಡಿ; ಗುಂಜಾಫಲ.

**गुंजाइश** - स्त्री० ಅವಕಾಶ; ಎಡೆ; ಸ್ಥಾನ; ಸಂದರ್ಭ.

**गुंजान** - वि० ದಟ್ಟ; ನಿಬಿಡ; ಅವಿರಳ.

**गुंजायमान** - वि० ಝೇಂಕರಿಸುವ.

**गुंजार** - पुं० ಝೇಂಕಾರ.

**गुंडई** - स्त्री० ಪೋಕರಿತನ; ಅನ್ಯಾಯ.

**गुंडा** - वि० ಪೋಕರಿ; ಪಾಪಿ.

**गुंथना** - अ० ಪೋಣಿಸಲ್ಪಡು; ಹಾರವನ್ನು ಪೋಣಿಸು.

**गुंधना** - स० ನಾದಲ್ಪಡು; ಹದ ಮಾಡಲ್ಪಡು.

**गुँधवाना** - स० ಹದಮಾಡಿಸು.

**गुँधाई** - स्त्री० ಹದಮಾಡುವಿಕೆ; ಹದ ಮಾಡಿದುದರ ಕೂಲಿ.

**गुंफ, गुंफन** - पुं० ಗೊಂಚಲು; ಹೆಣೆದ ಅಥವಾ ಪೋಣಿಸಿದಗಂಟು; ಸಿಕ್ಕು; ತೊಡಕು.

**गुंबज़, गुंबद** - पुं० ದೇವಸ್ಥಾನಗಳ ಮೇಲಿನ ಗೋಲಾಕೃತಿಯ ಗೋಪುರ.

**गुंबा** - ಪುಂ ತಲೆಯಲ್ಲಿ ಏಟಿನಿಂದ ಎದ್ದ ಬಾಸುಂಡೆ.

**गुआ** - ಪುಂ ಅಡಿಕೆ.

**गुइयाँ** - ಸ್ತ್ರೀಂ ಗೆಳತಿ; ಸಖಿ.

**गुच्ची** - ಸ್ತ್ರೀಂ ಚಿಣ್ಣೀ ಕೋಲಾಟದ ಕುಳಿ.

**गुचलकी** - ಸ್ತ್ರೀಂ ಪೊರೆ ಏರುವುದು.

**गुच्छ** - ಪುಂ ಗೊಂಚಲು; ಸಮೂಹ; ಕಟ್ಟು; ಗುತ್ತಿ.

**गुच्छक**, **गुच्छा** - ಪುಂ ದೇಂ **गुच्छ.**

**गुच्छेदार** - **विं** ಗೊಂಚಲುಗಳುಳ್ಳ.

**गुज़र** - ಪುಂ ಗತಿ; ಪ್ರವೇಶ; ಜೀವನೋಪಾಯ; ಕಾಲಕ್ಷೇಪ; ನಿರ್ವಾಹ;—**जाना** - ಸಾಯು; ಮರಣಹೊಂದು.

**गुज़र-गाह** - ಸ್ತ್ರೀಂ ಮಾರ್ಗ; ದಾರಿ; ನದೀ ಘಟ್ಟ.

**गुज़रना** - ಅಂ ಹೋಗು; ಕಾಲ ಕಳೆದು ಹೋಗು; ನಡೆ; ಸಾಗು; ನಿರ್ವಹಿಸು; ಸಾಯು.

**गुज़र-बसर** - ಪುಂ ಜೀವನ ನಿರ್ವಾಹ; ಕಾಲಕ್ಷೇಪ.

**गुज़रान** - ಪುಂ ದೇಂ **गुज़र.**

**गुज़श्ता** - **विं** ಕಳೆದುಹೋದ; ಕಳೆದ; ಹಿಂದಿನ.

**गुज़राना**, **गुजाराना** - ಸಂ (ಕಾಲ) ಕಳೆಯು.

**गुज़रिया** - ಸ್ತ್ರೀಂ ಗೊಲ್ಲಗಿತ್ತಿ, ಗೋಪಿಕೆ.

**गुज़ारा** - ಪುಂ ಜೀವನ ನಿರ್ವಾಹಕ್ಕಾಗಿ ಸಿಗತಕ್ಕ ವೇತನ; ಸುಂಕದಕಟ್ಟೆ.

**गुज़ारिश** - ಸ್ತ್ರೀಂ ಅರಿಕೆ; ನಿವೇದನೆ.

**गुझिया** - ಸ್ತ್ರೀಂ ಖರ್ಜಿಕಾಯಿ; ಒಂದು ಬಗೆಯ ತಿನಸು.

**गुटकना** - ಅಂ ಪಾರಿವಾಳದಂತೆ ಕೂಗು. ಸಂ ನುಂಗು.

**गुटका** - ಪುಂ ಬಹಳ ಚಿಕ್ಕಪುಸ್ತಕ; ಬುಗರಿ.

**गुटरगूँ** - ಸ್ತ್ರೀಂ ಪಾರಿವಾಳದ ಕೂಗು.

**गुटिका** - ಸ್ತ್ರೀಂ ಗುಳಿಗೆ.

**गुट्ट** - ಪುಂ ದಳ; ಸಮೂಹ; ಗೋಷ್ಠಿ.

**गुट्टा** - **विं** ಕುಳ್ಳ; ಗಿಡ್ಡ.

**गुठली** - ಸ್ತ್ರೀಂ ವಾಟೆ; ಗೊರಟು; ಯಾವುದಾದರೂ ಹಣ್ಣಿನ ದೊಡ್ಡ ಮತ್ತು ಗಟ್ಟಿಯಾದ ಬೀಜ.

**गुडंबा** - ಪುಂ ಮಾವಿನ ಹಣ್ಣಿನ ಮುರಬ್ಬ; ಗುಳಾಂಬ.

**गुड़** - ಪುಂ ಬೆಲ್ಲ;—**गोबर होना** - ಮಾಡಿದ ಕೆಲಸವೆಲ್ಲಾ ಹಾಳಾಗು.

**गुड़गुड़ाना** - ಅಂ ಗುಳುಗುಳು ಯೆಂದು ಶಬ್ದಮಾಡು. ಸಂ ಹುಕ್ಕ ಸೇದು.

**गुड़गुड़ी** - ಸ್ತ್ರೀಂ ಗುಡಿಗುಡಿ; ಹುಕ್ಕ.

**गुड़हर**, **गुडहल** - ಪುಂ ದಾಸವಾಳದಹೂವು.

**गुड़िया** - ಸ್ತ್ರೀಂ ಬಟ್ಟೆಗಳಿಂದ ಮಾಡಿದ ಆಟದ ಗೊಂಬೆ; ಬೊಂಬೆ.

**गुड़ी** - स्त्री० ಚಿಟ್ಟಿಹುಳ; ಪತಂಗ; ದೊಡ್ಡ ಗಾಳೀಪಟ.

**गुड्डा** - पु० ಬಟ್ಟೆಯಲ್ಲಿಮಾಡಿದ ಬೊಂಬೆ; ದೊಡ್ಡಗಾಳೀಪಟ.

**गुड्डी** - स्त्री० दे० पतंग.

**गुण** - पु० ಗುಣ; ಧರ್ಮ; ಪ್ರಭಾವ; ಶೀಲ; ಸ್ವಭಾವ; ಫಲ.

**गुणज्ञता** - स्त्री० ಗುಣ ಪರೀಕ್ಷೆ.

**गुनफल** - पु० ಗುಣಿಸಿಬಂದ ಫಲ.

**गुणांक** - पु० ಗುಣಿಸಲ್ಪಡುವ ಸಂಖ್ಯೆ.

**गुणा** - पु० ಗುಣಿತ; ಮಡಿ.

**गुणातीत** - वि० ಬಹಳ ಗುಣಗಳುಳ್ಳ.

**गुणी** - वि० ಗುಣವಂತ. पु० ನಿಪುಣನಾದ ಮನುಷ್ಯ.

**गुण्य** - पु० ಗುಣಿಸುವ ಸಂಖ್ಯೆ.

**गुण्यांक** - पु० ಗುಣಿಸಲ್ಪಡುವ ಸಂಖ್ಯೆ.

**गुत्थमगुत्था** - पु० ಗುದ್ದಾಟ; ಮುಷ್ಟಾಮುಷ್ಟಿ; ಜಗಳ; ಸಿಕ್ಕು.

**गुत्थी** - स्त्री० ಸಿಕ್ಕು; ಗಂಟು; ತೊಡಕು.

**गुथना** - अ० ಪೋಣಿಸಲ್ಪಡು.

**गुथवाना** - स० ಪೋಣಿಸಿಸು.

**गुदगुदा** - वि० ಮಾಂಸಲವಾದ; ಬಹಳ ಮೆತ್ತಗಿರುವ.

**गुदगुदाना** - अ० ಉಲ್ಲಾಸಪಡು; ತಿಕ್ಕಲಾಗು.

**गुदगुदी** - स्त्री० ತಿಕ್ಕಲಾಟ; ನಗುವಿನ ಸೊಕ್ಕು; ಆಹ್ಲಾದ; ಕಾಮೋದ್ದೀಪನ.

**गुदड़िया** - पु० ಹರಕು ಚಿಂದಿ ಬಟ್ಟೆಯನ್ನು ಹೊದ್ದುಕೊಂಡವನು; ಬಟ್ಟೆ ಚಿಂದಿಯ ವ್ಯಾಪಾರಿ; ಡೇರೆ ಗುಡಾರ ಮುಂತಾದವುಗಳನ್ನು ಬಾಡಿಗೆಗೆ ಕೊಡುವವ.

**गुदड़ी** - स्त्री० ಹರಕು ಚಿಂದಿಯಬಟ್ಟೆ; ಕಂತೆ;—**का लाल** - ಕೆಟ್ಟಸ್ಥಳದಲ್ಲಿ ಉತ್ತಮವಾದ ಪದಾರ್ಥ ಇರುವಿಕೆ.

**गुदड़ी-बाज़ार** - पु० ಗುಜರಿಸಂತೆ.

**गुदरना** - अ० ದೂರವಾಗು; ತ್ಯಜಿಸು.

**गुदा** - स्त्री० ಮಲದ್ವಾರ.

**गुदाज़** - वि० ಮಾಂಸಲವಾದ; ಮೆತ್ತನೆಯ; ದಯಾಳು.

**गुदाना** - स० ಮುಚ್ಚೆಹಾಕಿಸು.

**गुदाम** - पु० दे० गोदाम.

**गुद्दी** - स्त्री० ಹೆಗ್ಗತ್ತು; ತಲೆಯ ಹಿಂಭಾಗ; ಕೊರಳಿನ ಹಿಂಬಾಗ.

**गुन** - पु० दे० गुण.

**गुनगुना** - वि० ಉರುಗು ಬೆಚ್ಚಗಿರುವ ನೀರು.

**गुनगुनाना** - अ० ಅಸ್ಪಷ್ಟವಾಗಿ ಮಾತನಾಡು; ಗೊಣಗುಟ್ಟು.

**गुनगुनाहट** - स्त्री० ಗೊಣಗುಟ್ಟುವದು.

**गुनचा** - पु० ಮೊಗ್ಗು.

**गुनना** - स० ಗುಣಿಸು; ಯೋಚಿಸು.

**गुनह** - पु० दे० गुनाह.

**गुनहगार** - वि० ಪಾಪಿ; ಅಪರಾಧಿ.

**गुनहगारी** - स्त्री० ಪಾಪ; ದೋಷ; ಅಪರಾಧ.

गुनही - पु० ಅಪರಾಧಿ.

गुना - पु० ಸಂಖ್ಯಾವಾಚಕ ಶಬ್ದಗಳ ಕೊನೆಯಲ್ಲಿ ಸೇರತಕ್ಕ ಪ್ರತ್ಯಯ; ಉದಾ :—दुगुना, चौगुना.

गुनाह - पु० ಅಪರಾಧ; ಪಾಪ.

गुनाही - पु० ಅಪರಾಧಿ; ದೋಷಿ.

गुनिया - पु० ಗುಣವಂತ.

गुन्ना - पु० ಅರ್ಧಾನುಸ್ವಾರ, ಅನುಸ್ವಾರ.

गुपचुप - क्रि० ಸದ್ದಿಲ್ಲದೆ; ಸುಮ್ಮಗೆ.

गुप्त - वि० ಅಡಗಿರುವ; ಗೂಢವಾದ; ವೈಶ್ಯರ ಅಡ್ಡಹೆಸರು.

गुप्ती - स्त्री० ಒಳಗಡೆ ಕತ್ತಿಯಿರುವ ಊರುಗೋಲು.

गुफा - स्त्री० ಗುಹೆ; ಕಂದರ.

गुफ्तगू - स्त्री० ವಾರ್ತಾಲಾಪ; ಮಾತುಕತೆ.

गुबरैला - पु० ಸಗಣಿಹುಳ.

गुबार - पु० ಮಣ್ಣು; ಧೂಳು; ಮನಸ್ಸಿನೊಳಗಿನ ದ್ವೇಷ.

गुब्बारा - पु० ಆಕಾಶಬುಟ್ಟಿ.

गुम - पु० ಅಡಗಿರುವ; ಅಪ್ರಕಟವಾದ; —होना - ನಾಶವಾಗು; ಹಾಳಾಗು; ಅದೃಶ್ಯವಾಗು.

गुमटा - पु० ತಲೆ ಅಥವಾ ಹಣೆಯಲ್ಲಿ ಪೆಟ್ಟು ಬೀಳುವದರಿಂದುಟಾಗುವ ಬಾಸುಂಡೆ.

गुमटी - स्त्री० ರೈಲು ಅಡ್ಡಗೇಟು.

गुमनाम - वि० ಅಜ್ಞಾತ; ಹೆಸರಿಲ್ಲದ; ಅಪ್ರಸಿದ್ಧ.

गुमर - पु० ಹೆಮ್ಮೆ; ಅಭಿಮಾನ; ಮನಸ್ಸಿನೊಳಗಿನ ದ್ವೇಷ.

गुमराह - वि० ಕುಮಾರ್ಗಿ; ದಾರಿ ತಪ್ಪಿದ.

गुमरी - स्त्री० ತಲೆತಿರುಗುವಿಕೆ.

गुमान - पु० ಅಹಂಕಾರ; ಅಭಿಮಾನ.

गुमाना - स० ಕಳಕೊಳ್ಳು.

गुमानी - वि० ಅಹಂಕಾರಿ.

गुमाश्ता - पु० ಗುಮಾಸ್ತೆ; ಕರಣೀಕ.

गुम्मा - वि० ಮೌನವಾಗಿರುವ.

गुर - पु० ಬೆಲ್ಲ; ರಹಸ್ಯ; ಮೂಲಮಂತ್ರ.

गुरगा - पु० ಶಿಷ್ಯ; ದೂತ; ಗೂಢಚಾರ.

गुरदा - पु० ಪರಾಕ್ರಮ; ಒಂದು ವಿಧವಾದ ಚಿಕ್ಕ ತುಪಾಕಿ; ಮೂತ್ರಪಿಂಡ.

गुरबत - स्त्री० ಪ್ರಯಾಣ; ಪರದೇಶ.

गुरबा - स्त्री० ಬೆಕ್ಕು.

गुरबा - पु० ग़रीब का बहु०.

गुरिया - स्त्री० ಮಣಿ.

गुरवी - वि० ಅಹಂಕಾರಿ; ಗರ್ವಿ.

गुरु - वि० ಭಾರವಾದ. पु० ದೇವತೆಗಳ ಗುರು ಬೃಹಸ್ಪತಿ; ಶಿಕ್ಷಕ; ಅಧ್ಯಾಪಕ :— घंटाल - ಅತ್ಯಂತ ಬುದ್ಧಿವಂತ, ಪುಂಡ.

गुरुआइन - स्त्री० ಗುರುಪತ್ನಿ; ಉಪಾಧ್ಯಾಯಿನಿ.

गुरुआई - वि० ಗುರುವಿನ ಧರ್ಮ.

गुरुद्वारा - पु० ಸಿಕ್ಖರ ಗುಡಿ.

**गुरुभाई** - **वि०** ಸಹಪಾಠಿ; ಒಂದೇ ಗುರುವಿನ ಬಳಿ ಅಧ್ಯಯನ ಮಾಡಿದವರು.

**गुरुमुख** - **वि०** ಗುರುವಿನಿಂದ ಉಪದೇಶಪಡೆದ.

**गुरुमुखी** - **स्त्री०** ಸಿಕ್ಖರಲಿಪಿ, ಪಂಜಾಬಿಭಾಷೆಯನ್ನು ಬರೆಯುವ ಲಿಪಿ.

**गुरूर** - **पु०** ಅಹಂಕಾರ.

**गुरेज़** - **स्त्री०** ಓಡುವುದು.

**गुरेरना** - **स०** ದುರದುರನೆ ನೋಡು.

**गुर्गा** - **पु०** ಗುಳ್ಳೆನರಿ; ನರಿ.

**गुर्ज़** - **पु०** ಗದೆ; ಬುರುಜು.

**गुर्जर** - **पु०** ಗುಜರಾತದೇಶ; ಗುರ್ಜರ ಎಂಬ ಜಾತಿಯ ಜನರು.

**गुर्ज़री** - **स्त्री०** ಗುಜರಾತದೇಶದ ಮಹಿಳೆ.

**गुर्द** - **वि०** ಧೈರ್ಯಶಾಲಿ.

**गुर्दा** - **पु०** ಬಿಲ್ಲಿನ ಹೆದೆ.

**गुर्राना** - **अ०** ಗುರು ಗುಟ್ಟುವುದು; ಗುರ್ರೆನ್ನುವುದು.

**गुर्री** - **स्त्री०** ಪುರಿ.

**गुर्वी** - **स्त्री०** ಗರ್ಭಿಣಿ. **वि०** ಭಾರವಾದ.

**गुर्सी** - **स्त्री०** ಇದ್ದಲು ಒಲೆ.

**गुल** - **पु०** ಗುಲಾಬಿಹೂವು; ಹೂವು; ನಗುವಾಗ ಗಲ್ಲದಮೇಲೆ ತೋರಿಬರುವ ಪುಷ್ಪಾಕೃತಿಯ ಗುರುತು; ದೀಪದಕುಡಿ;—**खिलना** - ವಿಚಿತ್ರವಾದ ಘಟನೆ ಸಂಭವಿಸು; ಜಗಳ ಹುಟ್ಟು.

**गुल** - **पु०** ಸದ್ದು; ಗಲಾಟೆ.—**करना** - ಗಲಾಟೆಮಾಡು;—**तराश** - ಕುಡಿ ಕತ್ತರಿಸುವ ಕತ್ತರಿ.

**गुलकंद** - **पु०** ಗುಲಾಬಿ ಮುರಬ್ಬ; ಗುಲ್ಕಂ.

**गुलकारी** - **स्त्री०** ಹೂಗಳನ್ನು ಚಿತ್ರಿಸುವ ಕೆಲಸ.

**गुलगुल** / **गुलगुला** - **वि०** ಮೃದುವಾದ; ನುಣ್ಣಗಿರುವ.

**गुलगुलाना** - **स०** ನುಣ್ಣಗೆ ಕಿವುಚು.

**गुलगूँ** - **वि०** ಗುಲಾಬಿ ಬಣ್ಣದ; ರೋಜಾಬಣ್ಣದ.

**गुलचाँदनी** - **पु०** ಇರುಳು ಮಲ್ಲಿಗೆ.

**गुलचा** - **पु०** ಗಲ್ಲದಮೇಲೆ ಪ್ರೀತಿಯಿಂದ ಮೆತ್ತಗೆ ತಟ್ಟುವುದು.

**गुलचाना** - **स०** ಗಲ್ಲದಮೇಲೆ ಪ್ರೀತಿಯಿಂದ ಮೆತ್ತಗೆ ತಟ್ಟು.

**गुलचीं** - **पु०** ತೋಟಗಾರ; ಮಾಲಿ.

**गुलछर्रा** - **पु०** ಸುಖ; ಮಜಾ; ವಿಲಾಸ;—**उड़ाना** - ಆನಂದಿಸು; ಮಜಾಮಾಡು.

**गुलज़ार** - **पु०** ತೋಟ; ಉದ್ಯಾನವನ. **वि०** ಕಂಗೊಳಿಸುವ; ಹಸರುಪಚ್ಚೆಯಿಂದೊಡಗೂಡಿದ; ರಮ್ಯವಾದ.

**गुलझटी** - **स्त्री०** ಗಂಟು; ಸಿಕ್ಕು; ಸುಕ್ಕು; ನಿರಿಗೆ.

**गुलदाऊदी** - **स्त्री०** ಸೇವಂತಿಗೆ.

**गुलदस्ता** - **पु०** ಹೂಗೊಂಚಲು.

**गुलदान** - **पु०** ಹೂಗಳ ಗುತ್ತಿಯನ್ನಿಡುವ ಪಾತ್ರೆ; ಹೂಜಾಡಿ.

**गुलदाना** - पुं० ಸಿಹಿಬೂಂದಿ.
**गुलदुम** - स्त्री० ಬುಲ್‌ಬುಲ್ ಪಕ್ಷಿ
**गुलनार** - पुं० ದಾಳಿಂಬೆ ಹೂವು; ದಾಳಿಂಬೆಹೂವಿನ ಬಣ್ಣ; ಒಂದು ಜಾತಿಯ ದಾಳಿಂಬೆ.
**गुलफ़ाम** - वि० ಬಹಳಸುಂದರ; ಗುಲಾಬಿಹೂವಿನಂಥ.
**गुलबदन** - वि० ಕೋಮಲ.
**गुलबर्ग** - पुं० ಗುಲಾಬಿ ಎಲೆ.
**गुलमा** - पुं० ಹೊಡೆತ ಅಥವಾ ಗಾಯದಿಂದ ಉಂಟಾಗುವ ತಲೆಯಮೇಲಿನ ಬೀಗು ಅಥವಾ ಬಾವು; ಬಾತುಕೊಳ್ಳುವಿಕೆ.
**गुलरू** - वि० ಸುಂದರವಾದ.
**गुलरेज़** - पुं० ಹೂಬಾಣ.
**गुलशन** - पुं० ತೋಟ; ಉದ್ಯಾನ.
**गुलशब्बो** - पुं० ರಜನಿಗಂಧ; ನೈಟ್ ಕ್ವೀನ್.
**गुलाब** - पुं० ಗುಲಾಬಿ;—**पाश** ಪನ್ನೀರುದಾನಿ; —**पाशी** - ಪನ್ನೀರೆರೆಚುವುದು.
**गुलाब-जामुन** - पुं० ಜಾಮೂನು.
**गुलाबी** - वि० ಗುಲಾಬಿಯ ಬಣ್ಣದ; ಪನ್ನೀರಿನಿಂದ ಕೂಡಿರುವ.
**गुलाम** - पुं० ಆಳು; ದಾಸ; ಸೇವಕ; ನೌಕರ;—**का तिलाम** - ದಾಸಾನುದಾಸ; ಅಡಿಯಾಳು.
**गुलामी** - स्त्री० ಗುಲಾಮಗಿರಿ; ಪರಾಧೀನತೆ.
**गुलाल** - पुं० ಗುಲಾಲು; ಓಕುಳಿಯ ಪುಡಿ.
**गुलिस्ताँ** - पुं० ಹೂದೋಟ.
**गुली** - स्त्री० ಹೊಟ್ಟು, ಭೂಸಾ.
**गुलू** - पुं० ಕತ್ತು.
**गुलूबंद** - पुं० ಕಂಠಿ.
**गुलेंदा** - पुं० ಇಪ್ಪೇಹೂ.
**गुलेनार** - पुं० दे० **गुलनार.**
**गुलेल** - स्त्री० ಪಕ್ಷಿಗಳನ್ನೂ ಕಪಿಗಳನ್ನೂ ಹೊಡೆಯಲು ಉಪಯೋಗಿಸುವ ಮಿಡಿಬಿಲ್ಲು.
**गुलेलची** - पुं० ಮಿಡಿಬಿಲ್ಲು ಹೊಡೆಯುವವ.
**गुलेला** - पुं० दे० **गुलेल.**
**गुल्फ़** - पुं० ಕಾಲಿನ ಹರಡು; ಗಿರಿಗೆ.
**गुल्म** - पुं० ಒಂದು ವಿಧವಾದ ಉದರವ್ಯಾಧಿ; ಗುಲ್ಮವ್ಯಾಧಿ.
**गुल्ला** - पुं० ಮಿಡಿ ಬಿಲ್ಲಿಗೆ ಉಪಯೋಗಿಸುವ ಮಣ್ಣಿನ ಗೋಲಿ; ಬೊಬ್ಬೆ; ಗುಲ್ಲು.
**गुल्लाला** - पुं० ಒಂದು ಕೆಂಪುಹೂ.
**गुल्ली** - स्त्री० ಗೊರಟು; ಗಟ್ಟಿಯಾದ ಬೀಜ; ಚಿಣ್ಣಿ.
**गुवा** - पुं० ಅಡಿಕೆ.
**गुसल** - पुं० दे० **गुस्ल.**
**गुसाँई** - पुं० दे० **गोसाँई.**
**गुस्ताख़** - वि० ಅಶಿಷ್ಟ; ದಿಟ್ಟತನದ; ಹಿರಿಯರನ್ನು ಅಲಕ್ಷಿಸುವ ಸ್ವಭಾವವುಳ್ಳ.
**गुस्ताख़ी** - स्त्री० ಅಶಿಷ್ಟ; ದಿಟ್ಟತನ.
**गुस्ल** - पुं० ಸ್ನಾನ; ಜಳಕ.
**गुस्लख़ाना** - पुं० ಸ್ನಾನದ ಮನೆ.

**गुस्सा** - ಪುಂ ಕೋಪ; ಸಿಟ್ಟು.

**गुस्सैल**, **गुस्साव** } ವಿಂ ಮುಂಗೋಪಿ.

**गुह** - ಪುಂ ಗುಪ್ತವಾದ ಸ್ಥಳ; ಹೃದಯ.

**गुहराना** - ಸಂ ಕೂಗು; ಒದರು, ಗಟ್ಟಿಯಾಗಿ ಕರೆ.

**गुहा** - ಸ್ತ್ರೀಂ ದೆಂ **गुफा.**

**गुहार** - ಸ್ತ್ರೀಂ ಮೊರೆಯಿಡು.

**गुह्य** - ಪುಂ ಗೋಪ್ಯವಾದ; ಗೂಢವಾದ.

**गूँगा** - ಪುಂ ಮೂಕ; ಮೂಗ. **गूँगे का गुड़** - ಅನುಭವಿಸಿಯೂ ಹೇಳಲಾಗದ.

**गूँगी** - ಸ್ತ್ರೀಂ ಮೂಕಳು.

**गूँज** - ಸ್ತ್ರೀಂ ಭ್ರಮರಗಳ ಝೇಂಕಾರ; ಪ್ರತಿಧ್ವನಿ.

**गूँजना** - ಅಂ ಝೇಂಕರಿಸು; ಪ್ರತಿಧ್ವನಿಯು ಕೇಳಿಸು.

**गूँथना** - ಸಂ ದೆಂ **गूथना**

**गूँधना** - ಸಂ ನೀರಿನಲ್ಲಿ ನೆನೆಸಿ ಕಲಸು; ನಾದು; ಹಿಸುಕು.

**गूगल** - ಪುಂ ಗೂಬೆ.

**गूजर** - ಪುಂ ಗೊಲ್ಲರಲ್ಲಿ ಒಂದುಜಾತಿ.

**गूढ़** - ವಿಂ ಗೂಢ; ಗಂಭೀರ; ಕಠಿಣ.

**गूढोक्ति** - ಸ್ತ್ರೀಂ ಒಬ್ಬನನ್ನು ಕುರಿತು ಮತ್ತೊಬ್ಬನಿಗೆ ನಾಟುವಂತೆ ಹೇಳುವ ಅಲಂಕಾರೋಕ್ತಿ.

**गूथना** - ಸಂ ಪೋಣಿಸು; ಟಾಂಕಿ ಹೊಲಿ.

**गूदड़** - ಪುಂ ಹಳೆಯ ಕಂತೆ; ಹರಕು ಬಟ್ಟೆ; ಚಿಂದಿ.

**गूदड़ी का लाल** - ಪುಂ ಕೆಸರಿನಲ್ಲಿನ ಕಮಲ; ನಿಕೃಷ್ಟ ಸ್ಥಾನದಲ್ಲಿ ಶ್ರೇಷ್ಠ ವಸ್ತು.

**गूदर** - ಪುಂ ದೆಂ **गूदड़.**

**गूदा** - ಪುಂ ಹಣ್ಣಿನ ತಿರುಳು.

**गून** - ಸ್ತ್ರೀಂ ದೋಣಿಯ ಹಗ್ಗ; ಒಂದು ಜಾತಿಯ ಹುಲ್ಲು; ದೊಡ್ಡ ಬಿಂದಿಗೆ.

**गूना** - ಪುಂ ಹಿತ್ತಾಳೆ ಅಥವಾ ಬಂಗಾರದಿಂದ ಮಾಡಿದಗಿಲೀಟು ರಂಗು.

**गूमा** - ಪುಂ ದ್ರೋಣಪುಷ್ಪಿ ಎಂಬ ಮೂಲಿಕೆ.

**गूलर** - ಪುಂ ಅತ್ತಿ; ಔದುಂಬರ; **—का फूल** - ಅಮಾವಾಸ್ಯೆಯ ಚಂದ್ರ; ಅಸಂಭವ ಮಾತು.

**गूह** - ಪುಂ ಮಲ; ಗಲೀಜು.

**गृह** - ಪುಂ ಮನೆ; ಮಂದಿರ.

**गृहस्थ** - ಪುಂ ಸಂಸಾರಿ; ಸಜ್ಜನ.

**गृहस्थी** - ಸ್ತ್ರೀಂ ಗೃಹಸ್ಥಾಶ್ರಮ; ಮನೆಯ ಸಾಮಾನು.

**गृह्य** - ವಿಂ ಗೃಹಸಂಬಂಧವಾದ.

**गेंगटा** - ಪುಂ ನಳ್ಳಿ.

**गेंडक** - ಪುಂ ಚೆಂಡುಹೂ.

**गेंड़ना** - ಸಂ ಹೊಲದಸುತ್ತಲೂ ಬದುವು ಹಾಕು.

**गेंड़ली** - ಸ್ತ್ರೀಂ ಕುಂಡಲ; ಸುರುಳು.

**गेंडा** - ಕಬ್ಬು.

गुलदाना - ಪುಂ ಸಿಹಿಬೂಂದಿ.

गुलदुम - ಸ್ತ್ರೀಂ ಬುಲ್‌ಬುಲ್ ಪಕ್ಷಿ.

गुलनार - ಪುಂ ದಾಳಿಂಬೆ ಹೂವು; ದಾಳಿಂಬೆಹೂವಿನ ಬಣ್ಣ; ಒಂದು ಜಾತಿಯ ದಾಳಿಂಬೆ.

गुलफ़ाम - ವಿಂ ಬಹಳಸುಂದರ; ಗುಲಾಬಿಹೂವಿನಂಥ.

गुलबदन - ವಿಂ ಕೋಮಲ.

गुलबर्ग - ಪುಂ ಗುಲಾಬಿ ಎಲೆ.

गुलमा - ಪುಂ ಹೊಡೆತ ಅಥವಾ ಗಾಯದಿಂದ ಉಂಟಾಗುವ ತಲೆಯಮೇಲಿನ ಬೀಗು ಅಥವಾ ಬಾವು; ಬಾತುಕೊಳ್ಳುವಿಕೆ.

गुलरू - ವಿಂ ಸುಂದರವಾದ.

गुलरेज - ಪುಂ ಹೂಬಾಣ.

गुलशन - ಪುಂ ತೋಟ; ಉದ್ಯಾನ.

गुलशब्बो - ಪುಂ ರಜನಿಗಂಧ; ನೈಟ್ ಕ್ವೀನ್.

गुलाब - ಪುಂ ಗುಲಾಬಿ;—पाश ಪನ್ನೀರುದಾನಿ; — पाशी - ಪನ್ನೀರೆರೆಚುವುದು.

गुलाब-जामुन - ಪುಂ ಜಾಮೂನು.

गुलाबी - ವಿಂ ಗುಲಾಬಿಯ ಬಣ್ಣದ; ಪನ್ನೀರಿನಿಂದ ಕೂಡಿರುವ.

गुलाम - ಪುಂ ಆಳು; ದಾಸ; ಸೇವಕ; ನೌಕರ;—का तिलाम - ದಾಸಾನುದಾಸ; ಅಡಿಯಾಳು.

गुलामी - ಸ್ತ್ರೀಂ ಗುಲಾಮಗಿರಿ; ಪರಾಧೀನತೆ.

गुलाल - ಪುಂ ಗುಲಾಲು; ಓಕುಳಿಯ ಪುಡಿ.

गुलिस्ताँ - ಪುಂ ಹೂದೋಟ.

गुली - ಸ್ತ್ರೀಂ ಹೊಟ್ಟು, ಭೂಸಾ.

गुलू - ಪುಂ ಕತ್ತು.

गुलूबंद - ಪುಂ ಕಂಠಿ.

गुलेंदा - ಪುಂ ಇಪ್ಪೇಹೂ.

गुलेनार - ಪುಂ ದೇಂ गुलनार.

गुलेल - ಸ್ತ್ರೀಂ ಪಕ್ಷಿಗಳನ್ನೂ ಕಪಿಗಳನ್ನೂ ಹೊಡೆಯಲು ಉಪಯೋಗಿಸುವ ಮಿಡಿಬಿಲ್ಲು.

गुलेलची - ಪುಂ ಮಿಡಿಬಿಲ್ಲು ಹೊಡೆಯುವವ.

गुलेला - ಪುಂ ದೇಂ गुलेल.

गुल्फ - ಪುಂ ಕಾಲಿನ ಹರಡು; ಗಿರಿಗೆ.

गुल्म - ಪುಂ ಒಂದು ವಿಧವಾದ ಉದರವ್ಯಾಧಿ; ಗುಲ್ಮವ್ಯಾಧಿ.

गुल्ला - ಪುಂ ಮಿಡಿ ಬಿಲ್ಲಿಗೆ ಉಪಯೋಗಿಸುವ ಮಣ್ಣಿನ ಗೋಲಿ; ಬೊಬ್ಬೆ; ಗುಲ್ಲು.

गुल्लाला - ಪುಂ ಒಂದು ಕೆಂಪುಹೂ.

गुल्ली - ಸ್ತ್ರೀಂ ಗೊರಟು; ಗಟ್ಟಿಯಾದ ಬೀಜ; ಚಿಣ್ಣೆ.

गुवा - ಪುಂ ಅಡಿಕೆ.

गुसल - ಪುಂ ದೇಂ गुस्ल.

गुसाँई - ಪುಂ ದೇಂ गोसाँई.

गुस्ताख़ - ವಿಂ ಅಶಿಷ್ಟ; ದಿಟ್ಟತನದ; ಹಿರಿಯರನ್ನು ಅಲಕ್ಷಿಸುವ ಸ್ವಭಾವವುಳ್ಳ.

गुस्ताख़ी - ಸ್ತ್ರೀಂ ಅಶಿಷ್ಟ; ದಿಟ್ಟತನ.

गुस्ल - ಪುಂ ಸ್ನಾನ; ಜಳಕ.

गुस्लख़ाना - ಪುಂ ಸ್ನಾನದ ಮನೆ.

गुस्सा - पु० ಕೋಪ; ಸಿಟ್ಟು.

गुस्सैल / गुस्साव - वि० ಮುಂಗೋಪಿ.

गुह - पु० ಗುಪ್ತವಾದ ಸ್ಥಳ; ಹೃದಯ.

गुहराना - स० ಕೂಗು; ಒದರು, ಗಟ್ಟಿಯಾಗಿ ಕರೆ.

गुहा - स्त्री० दे० गुफा.

गुहार - स्त्री० ಮೊರೆಯಿಡು.

गुह्य - पु० ಗೋಪ್ಯವಾದ; ಗೂಢವಾದ.

गूँगा - पु० ಮೂಕ; ಮೂಗ. गूँगे का गुड़ - ಅನುಭವಿಸಿಯೂ ಹೇಳಲಾಗದ.

गूँगी - स्त्री० ಮೂಕಳು.

गूँज - स्त्री० ಭ್ರಮರಗಳ ಝೇಂಕಾರ; ಪ್ರತಿಧ್ವನಿ.

गूँजना - अ० ಝೇಂಕರಿಸು; ಪ್ರತಿಧ್ವನಿಯು ಕೇಳಿಸು.

गूँथना - स० दे० गूथना

गूँधना - स० ನೀರಿನಲ್ಲಿ ನೆನೆಸಿ ಕಲಸು; ನಾದು; ಹಿಸುಕು.

गूगल - पु० ಗೂಬೆ.

गूजर - पु० ಗೊಲ್ಲರಲ್ಲಿ ಒಂದು ಜಾತಿ.

गूढ़ - वि० ಗೂಢ; ಗಂಭೀರ; ಕಠಿಣ.

गूढ़ोक्ति - स्त्री० ಒಬ್ಬನನ್ನು ಕುರಿತು ಮತ್ತೊಬ್ಬನಿಗೆ ನಾಟುವಂತೆ ಹೇಳುವ ಅಲಂಕಾರೋಕ್ತಿ.

गूथना - स० ಪೋಣಿಸು; ಟಾಂಕಿ ಹೊಲಿ.

गूदड़ - पु० ಹಳೆಯ ಕಂತೆ; ಹರಕು ಬಟ್ಟೆ; ಚಿಂದಿ.

गूदड़ी का लाल - पु० ಕೆಸರಿನಲ್ಲಿನ ಕಮಲ; ನಿಕೃಷ್ಟ ಸ್ಥಾನದಲ್ಲಿ ಶ್ರೇಷ್ಠವಸ್ತು.

गूदर - पु० दे० गूदड़.

गूदा - पु० ಹಣ್ಣಿನ ತಿರುಳು.

गून - स्त्री० ದೋಣಿಯ ಹಗ್ಗ; ಒಂದು ಜಾತಿಯ ಹುಲ್ಲು; ದೊಡ್ಡ ಬಿಂದಿಗೆ.

गूना - पु० ಹಿತ್ತಾಳೆ ಅಥವಾ ಬಂಗಾರದಿಂದ ಮಾಡಿದಗಿಲೀಟುರಂಗು.

गूमा - पु० ದ್ರೋಣಪುಷ್ಪಿ ಎಂಬ ಮೂಲಿಕೆ.

गूलर - पु० ಅತ್ತಿ; ಔದುಂಬರ; —का फूल - ಅಮಾವಾಸ್ಯೆಯ ಚಂದ್ರ; ಅಸಂಭವ ಮಾತು.

गूह - पु० ಮಲ; ಗಲೀಜು.

गृह - पु० ಮನೆ; ಮಂದಿರ.

गृहस्थ - पु० ಸಂಸಾರಿ; ಸಜ್ಜನ.

गृहस्थी - स्त्री० ಗೃಹಸ್ಥಾಶ್ರಮ; ಮನೆಯ ಸಾಮಾನು.

गृह्य - वि० ಗೃಹಸಂಬಂಧವಾದ.

गेंगटा - पु० ನಳ್ಳಿ.

गेंडक - पु० ಚೆಂಡುಹೂ.

गेंड़ना - स० ಹೊಲದಸುತ್ತಲೂ ಬದುವು ಹಾಕು.

गेंड़ली - स्त्री० ಕುಂಡಲ; ಸುರುಳು.

गेंडा - ಕಬ್ಬು.

गेंडुआ - पुं० ಕುದುರು ; ಸಿಂಬೆ.
गेंडुरी / गेंडुली - स्त्री० ಗಡಿಗೆ ಬಿಂದಿಗೆಗಳ ಕೆಳಗಿಡತಕ್ಕ ಹಗ್ಗದಸಿಂಬೆ.
गेंद - स्त्री० ಚೆಂಡು ; ಕಂದುಕ.
गेंदा - पुं० ಚೆಂಡುಮಲ್ಲಿಗೆ ಹೂವು.
गेय - वि० ಹಾಡತಕ್ಕ ; ಕೀರ್ತನೆ ಮಾಡತಕ್ಕ.
गेरना - स० ಹೊಯ್ಯು ; ಬೀಳಿಸು ; ಸುರಿಯು. अं० ಸತ್ತಲೂಬರು.
गेरुआ - वि० ಕಾಷಾಯ ; ಕಾವಿ ಬಣ್ಣದ.
गेरू - स्त्री० ಕಾವಿಕಲ್ಲು ; ಕಾವಿ.
गेसू - पुं० ಮುಂಗುರುಳು.
गेह - पुं० ಮನೆ ; ಗೃಹ.
गेहनी - स्त्री० ಮನೆಯಜಮಾನಿ ; ಗೃಹಣಿ ; ಹೆಂಡತಿ.
गेहुँअन - पुं० ಗೋಧಿನಾಗರ; ಗೋಧುಮೆ ಹಾವು.
गेहुँआ - वि० ಗೋಧಿಯ ಬಣ್ಣದ.
गेहूँ - पुं० ಗೋಧಿ ; ಗೋದುವೆ.
गैंड़ा - पुं० ಗೇಂಡಾಮೃಗ ; ಖಡ್ಗಮೃಗ.
गैंती - स्त्री० ಗುದ್ದಲಿ ; ಪಿಕಾಸಿ.
गैन - पुं० ಮಾರ್ಗ ; ದಾರಿ.
गैना - पुं० ಚಿಕ್ಕಎತ್ತು.
ग़ैब - पुं० ಪ್ರತ್ಯಕ್ಷವಲ್ಲದ ;—दाँ - ಭವಿಷ್ಯವಾದಿ.
ग़ैबत - स्त्री० ಚಾಡಿ ; ದೂರು.
ग़ैबानी - स्त्री० ದೊಡ್ಡ ಸಂಕಟ ; ಕೆಟ್ಟ ನಡತೆಯ ಸ್ತ್ರೀ.
ग़ैबी - वि० ಪರಿಚಯವಿಲ್ಲದ ; ತಿಳುವಳಿಕೆಗೆ ಬಾರದ.
गैया - स्त्री० ಆಕಳು.
गैर - पुं० ಅನ್ಯಾಯ.
ग़ैर - वि० ಅನ್ಯ ; ಬೇರೆ ; ಇತರ.
ग़ैरआबाद - वि० ವಾಸವಿಲ್ಲದ ; ಬೀಡು.
ग़ैरमनक़ूला - वि० ಸ್ಥಿರ ; ಅಚಲ.
ग़ैरमामूली - वि० ಅಸಾಧಾರಣವಾದ.
ग़ैरमुमकिन - वि० ಅಸಂಭವ.
ग़ैरवाजिब - वि० ಅನುಚಿತವಾದ.
ग़ैरहाज़िर - वि० ಅನುಪಸ್ಥಿತ; ಹಾಜರಿಲ್ಲದ.
ग़ैरहाज़िरी - स्त्री० ಅನುಪಸ್ಥಿತಿ ; ಹಾಜರಿಲ್ಲದಿರುವಿಕೆ.
ग़ैरत - स्त्री० ಲಜ್ಜೆ ; ನಾಚಿಕೆ.
गैरिक - पुं० दे० गेरू.
गैल - स्त्री० ಮಾರ್ಗ ; ದಾರಿ ; ಗಲ್ಲಿ.
गोंई - स्त्री० ಎತ್ತಿನ ಜೋಡಿ.
गोंठ - स्त्री० ಸೊಂಟದಲ್ಲಿ ಸಿಕ್ಕಿಸಿಕೊಳ್ಳುವ ಧೋತ್ರ ಅಥವಾ ವೇಷ್ಟಿಯ ಅಂಚು ; ನೆರಿಗೆ.
गोंठना - स० ಯಾವುದಾದರೂ ವಸ್ತುವಿನ ತುದಿಯನ್ನು ಸುರುಳಾಗಿ ದುಂಡಗೆ ಸುತ್ತು.
गोंड - पुं० ಮಧ್ಯ ಹಿಂದುಸ್ಥಾನದ ಕಾಡು ಜನರು.
गोंड़ा - पुं० ಬೇಲಿ ; ಉಪನಗರ ; ಮೊಹಲ್ಲಾ ; ಹಳ್ಳಿ ; ಅಂಗಳ.
गोंद - पुं० ಗೋಂದು ; ಅಂಟು.

**गो** - स्त्री० ಆಕಳು; ಇಂದ್ರಿಯ; ವಾಣಿ; ಪೃಥ್ವಿ; ನಾಲಿಗೆ; ಸ್ವರ್ಗ; ಶಬ್ದ.

**गो** - अव्य० ಆದಾಗ್ಯೂ; ಇದ್ದರೂ.

**गो** - प्रत्य० ಮಾಡುವವ. ಉದಾ: **कानूनगो.**

**गोइँठा** - पु० ಬೆರಣಿ.

**गोइंदा** - पु० ಗೂಢಚಾರ.

**गोइयाँ** - पु० ಸಂಗಡಿಗ; ಜೊತೆಗಾರ; ಸಹಚಾರಿ.

**गोई** - स्त्री० ಹೇಳಿಕೆ.

**गोकुल** - पु० ದನಗಳ ಮಂದೆ; ಗೋಶಾಲೆ.

**गोकोस** - पु० ಆಕಳು 'ಅಂಬಾ' ಎಂದು ಕರೆದರೆ ಕೇಳಿಸುವಷ್ಟು ದೂರ.

**गोखग** - पु० ಅಡ್ಡಾಡುವ ಪ್ರಾಣಿಗಳು.

**गोखरू** - पु० ನೆಗ್ಗಲುಮುಳ್ಳು.

**गोखा** - पु० ಗವಾಕ್ಷ.

**गोगरू** - पु० ತ್ರಿಪುಟಿ ಎಂಬ ಸಸ್ಯ; ಇದರಲ್ಲಿ ಕಡಲೆಯ ಗಾತ್ರದ ಮುಳ್ಳುಮುಳ್ಳಾದ ಕಾಯಿ ಬೆಳೆಯುತ್ತದೆ.

**गोचर** - पु० ಪಂಚೇಂದ್ರಿಯಗಳ ಮುಖಾಂತರ ಪ್ರಾಪ್ತವಾಗುವ ತಿಳುವಳಿಕೆ; ಗೋಚರಾವು.

**गोज़** - पु० ಹೂಸು; ಅಪಾನವಾಯು.

**गोजर** - पु० ಜರಿ; ಲಕ್ಷ್ಮಿಚೇಳು.

**गोजरा** - पु० ಗೋಧಿ ಜಾತಿಯ ಧಾನ್ಯ.

**गोजी** - स्त्री० ಕೋಲು; ದೊಣ್ಣೆ.

**गोझा** - पु० ಖರ್ಜಿಕಾಯಿ; ಕರಿಗಡಬು.

**गोट** - स्त्री०, **गोटा** - पु० } ಗೋಟು; ನಕ್ಕಿ; ಜರತಾರಿಲಡಿ **गोट खेलना** ಹಾವುಬೆಣೆಯಾಡುವದು.

**गोटियाचाल** - स्त्री० ಮೋಸಮಾಡುವಿಕೆ, ತಂತ್ರಹೂಡುವಿಕೆ.

**गोटी** - पु० ಹುಡುಗರ ಆಟದ ಬೋಕಿ ಚೂರು; ಪಗಡೆಯ ಕಾಯಿ.

**गोठ** - स्त्री० दे० **गोशाला.**

**गोठिल** - वि० ಮುರಿದುಹೋದ.

**गोड़** - पु० ಕಾಲು; ಪಾದ.

**गोड़इत** - पु० ಕಾವಲುಗಾರ; ಹರಕಾರ.

**गोड़ना** - स० ಅಗಿ; ತೋಡು.

**गोड़ा** - पु० ಮಂಚ ಬೆಂಚು ಮೊದಲಾದುವುಗಳ ಕಾಲು.

**गोड़ारी** - स्त्री० ಮಂಚದಲ್ಲಿ ಕಾಲಿಡುವ ಕಡೆ.

**गोड़िया** - स्त्री० ಚಿಕ್ಕಕಾಲು.

**गोणी** - स्त्री० ಗೋಣೀ ಚೀಲ.

**गोत** - पु० ವಂಶ; ಗೋತ್ರ.

**गोता** - पु० ಮುಳುಕ; ಗೋತ.

**गोताखोर**, **गोतामार** } पु० ಮುಳುಗುವವನು.

**गोतिया**, **गोती** } वि० ಸಗೋತ್ರಿಯ; ಒಂದೇ ವಂಶದ.

**गोतीत** - वि० ಜ್ಞಾನೇಂದ್ರಿಯಕ್ಕೆ ತಿಳಿಯಲಶಕ್ಯವಾದ.

**गोत्र** - ಪುಂ ವಂಶ; ಕುಲ.

**गोद** - ಸ್ತ್ರೀಂ ತೊಡೆ; ಮಡಿಲು; **—लेना** - ದತ್ತು ತೆಗೆದುಕೊಳ್ಳು; **—देना** - ಮಗನನ್ನು ದತ್ತು ಕೊಡು; **—भरना** - ಸಂತಾನೋತ್ಪತ್ತಿಯಾಗು.

**गोदना** - ಸಂ ಹಚ್ಚೆ ಕುಚ್ಚಿಸು; ಕೆಣಕು; ಪಚ್ಚೆ.

**गोदनी** - ಸ್ತ್ರೀಂ ಹಚ್ಚೆ ಕುಚ್ಚುವ ಸೂಜಿ.

**गोदाम** - ಪುಂ ಭಂಡಾರ; ಉಗ್ರಾಣ; ಗೋದಾಮು.

**गोदी** - ಸ್ತ್ರೀಂ ದೇಂ गोद.

**गोधूम** - ಪುಂ ಗೋಧಿ; ಗೋದುವೆ.

**गोधूल, गोधूली** - ಸ್ತ್ರೀಂ ಸಾಯಂಕಾಲ; ಸಂಜೆ; ಬೈಗು; ಮುಚ್ಚಂಜೆ.

**गोना** - ಸಂ ಮುಚ್ಚು; ಅಡಗಿಸು.

**गोनी** - ಸ್ತ್ರೀಂ ದೇಂ **गोणी**.

**गोप** - ಪುಂ ಗೌಳಿಗ; ಗೊಲ್ಲ.

**गोपद** - ಪುಂ ಹಸುಗಳಿರುವ ಸ್ಥಳ; ಆಕಳಗೊರಸಿನ ಗುರುತು.

**गोपदी** - ವಿಂ ಆಕಳಗೊರಸಿನಷ್ಟು.

**गोपन** - ಪುಂ ಬಚ್ಚಿಡುವಿಕೆ; ಅಡಗಿಸುವಿಕೆ; ರಕ್ಷಣೆ.

**गोपना** - ಸಂ ಬಚ್ಚಿಡು; ಅಡಗಿಸು.

**गोपुर** - ಪುಂ ನಗರದ್ವಾರ; ಪಟ್ಟಣದ ಹೆಬ್ಬಾಗಿಲು; ಗೋಪುರ.

**गोप्ता** - ವಿಂ ರಕ್ಷಕ; ಪುಂ ವಿಷ್ಣು.

**गोफ़ना, गोफ़न** - ಪುಂ ಕವಣೆ.

**गोफा** - ಪುಂ ಚಿಗುರು; ತಳಿರು.

**गोबर** - ಪುಂ ಸೆಗಣಿ; ಗೋಮಯ.

**गोबर-गणेश** - ವಿಂ ಕುರೂಪಿ; ಮೂರ್ಖ; ಅಕರ್ಮಣ್ಯ.

**गोबरी** - ಸ್ತ್ರೀಂ ಬೆರಣಿ.

**गोबरैला** - ಪುಂ ಸೆಗಣಿಹುಳ.

**गोबी, गोभी** - ಸ್ತ್ರೀಂ ಕೋಸುಗೆಡ್ಡೆ.

**गोमेध** - ಪುಂ ಗೋಮೇಧವೆಂಬ ಯಜ್ಞ; ನವರತ್ನಗಳಲ್ಲಿ ಒಂದು.

**गोया** - ಕ್ರಿಂ ಎಂಬಂತೆ; ಎಂಬೋಲ್. (मानों)

**गोर** - ಸ್ತ್ರೀಂ ಗೋರಿ; ಸಮಾಧಿ.

**गोरखधंधा** - ಪುಂ ರಗಳೆ; ತೊಡಕು.

**गोरस** - ಪುಂ ಹಾಲು; ಮೊಸರು; ಮಜ್ಜಿಗೆ.

**गोरा** - ವಿಂ ಬಿಳಿಯ; ಸುಂದರವಾದ; ಪುಂ ಸುಂದರಪುರುಷ; ಬಿಳಿಯನ.

**गोराई** - ಸ್ತ್ರೀಂ ಬಿಳುಪು; ಸೌಂದರ್ಯ.

**गोरी** - ಸ್ತ್ರೀಂ ಸುಂದರಿ.

**गोरू** - ಪುಂ ಕೊಂಬುಳ್ಳ ಪ್ರಾಣಿ.

**गोरोचन** - ಪುಂ ಆಕಳ ಎದೆಗುಂಡಿಗೆಯಲ್ಲಿರುವ ಹಳದಿಬಣ್ಣದ ಸುಗಂಧ ಪದಾರ್ಥ; ಗೋರೋಚನ.

**गोलंदाज़** - ಪುಂ ತೋಪು ಅಥವಾ ಫಿರಂಗಿ ಹೊಡೆಯುವವನು.

**गोलंदाज़ी** - ಸ್ತ್ರೀಂ ತೋಪು ಹೊಡೆಯುವ ವಿದ್ಯೆ.

**गोल** - **वि०** ದುಂಡಗಿರುವ; ವೃತ್ತಾಕಾರದ;—**मिर्च** - ಮೆಣಸು.

**गोलक** - **पु०** ಗೋಲೋಕ; ವಿಧವೆಯ ಮಗ; ದೊಡ್ಡ ಮಣ್ಣಿನ ಪಾತ್ರೆ; ಕಣ್ಣಿನ ಬಿಳೀ ಗುಡ್ಡು.

**गोल-बात** - **स्त्री०** ಚೆನ್ನಾಗಿ ತಿಳಿಯದ ಮಾತು.

**गोलमटोल** - **वि०** ಕುಳ್ಳಗೆ ದಪ್ಪನಾಗಿರುವ; ಅಸ್ಪಷ್ಟವಾದ.

**गोलमाल** - **पु०** ಗಡಿಬಿಡಿ; ಗೊಂದಲ.

**गोला** - **पु०** ಗುಂಡು; ಚಿಕ್ಕಚಿಕ್ಕ ಗೋಲಿಗಳು; ಮೊಳೆಗಳು ಕುಪ್ಪಿ ಚೂರು ಮತ್ತು ಸಿಡಿಮದ್ದಿನಿಂದ ತಯಾರಿಸಿದ ಭಾರೀ ಗುಂಡು; ಜಿನಸಿನಮುಂಡಿ; ದೋಣಿ ನಡೆಯಿಸುವ ಬಿದಿರು ಜಲ್ಲೆ.

**गोलाई** - **स्त्री०** ಗೋಲಾಕಾರ.

**गोलियाना** - **स०** ದುಂಡಗೆ ಮಾಡು.

**गोली** - **स्त्री०** ಮಾತ್ರೆ; ಗೋಲಿ; ತುಪಾಕಿಯ ಚಿಕ್ಕ ಗುಂಡು;—**खाना** - ಗುಂಡಿನೇಟು ತಿನ್ನು.

**गोश** - **पु०** ಕಿವಿ; ಶ್ರವಣೇಂದ್ರಿಯ.

**गोशमाली** - **स्त्री०** ಕಿವಿಹಿಂಡುವಿಕೆ.

**गोशवारा** - **पु०** ಕರ್ಣಕುಂಡಲ; ಪಗಡಿಯ ಅಂಚು; ಮೊತ್ತ; ಜುಮ್ಲಾ; ಗೋಶ್ವಾರೆ ಲೆಕ್ಕಾಚಾರ.

**गोशा** - **पु०** ಮೂಲೆ; ಪಕ್ಕ; ಏಕಾಂತ; ಬಿಲ್ಲಿನ ತುದಿ.

**गोश्त** - **पु०** ಮಾಂಸ;—**खार** - ಮಾಂಸಾಹಾರಿ.

**गोष्ठ** - **पु०** ಸಹಾಯ; ಸಮೂಹ; ಗೋಶಾಲೆ.

**गोसफंद** - **स्त्री०** ಆಡು; ಮೇಕೆ.

**गोसा** - **पु०** ಬೆರಣಿ; ಕುರುಳು.

**गोसाई** - **पु०** ಪರಮಾತ್ಮ; ಜಿತೇಂದ್ರಿಯ; ಸಂನ್ಯಾಸಿಗಳಲ್ಲಿ ಒಂದು ಭೇದ; ವಿರಕ್ತ; ಸಾಧು; ಸ್ವಾಮಿ.

**गोसैयाँ** - **पु०** ಸ್ವಾಮಿ; ಯಜಮಾನ.

**गोह** - **स्त्री०** ಹಲ್ಲಿಯ ಜಾತಿಗೆ ಸೇರಿದ ಕಾಡು ಮೊಸಳೆ; ಉಡ.

**गोहन** - **पु०** ಜೊತೆಗಾರ; ಸಂಗಡಿಗ.

**गोहरा** - **पु०** ಬೆರಣಿ.

**गोहराना** - **स०** ಕೂಗು; ಕರೆ.

**गोहार** - **स्त्री०** ದಮ್ಮಯ್ಯ ಎಂದು ಬೇಡಿಕೊಳ್ಳುವಿಕೆ; ಗೋಗರೆಯುವಿಕೆ.

**गौं** - **स्त्री०** ಸುಯೋಗ; ಸಂದರ್ಭ; ಆವಶ್ಯಕತೆ; ಸ್ವಾರ್ಥ;—**निकलना** - ಕಾರ್ಯಸಿದ್ಧಿಯಾಗು.

**गौंगीर** - **वि०** ಸ್ವಾರ್ಥಪರ; ಸ್ವಾರ್ಥಿ.

**गौख** - **स्त्री०** } ಗವಾಕ್ಷ; ಕಂಡಿ;
**गौखा** - **पु०** } ಕಿಟಿಕಿ.

**ग़ौग़ा** - **पु०** ಗಲಭೆ; ಗೊಂದಲ; ತುಮುಲಧ್ವನಿ; ಗಾಳಿಸುದ್ದಿ.

**गौचरी** - **स्त्री०** ಗೋಚರಾವು ತೆರಿಗೆ; ಹುಲ್ಲು ಬನ್ನಿ.

**गौड़** - **पु०** ವಂಗದೇಶದ ಒಂದು ಪ್ರಾಚೀನ ವಿಭಾಗ; ಬ್ರಾಹ್ಮಣ

ರಲ್ಲಿಯ ಒಂದು ಪಂಗಡ; ಗೌಡ ದೇಶೀಯ.

**गौज़** - ಸ್ತ್ರೀ॰ ಸಂಭಾಷಣೆ.

**गौण** - ವಿ॰ ಅಪ್ರಧಾನವಾದ; ಮುಖ್ಯವಲ್ಲದ; ಸಹಾಯಕವಾದ.

**गौद** - ಪುಂ॰ ಗೊನೆ; ಗೊಂಚಲು.

**गौदुमा** - ವಿ॰ ಗೋವಿನ ಬಾಲದಾಕೃತಿಯ; ಏರಿಳಿತಗಳುಳ್ಳ.

**गौनहार** - ಸ್ತ್ರೀ॰ ಮದುಮಗಳೊಂದಿಗೆ ಬರುವ ಸಖಿ.

**गौना** - ಪುಂ॰ ಮಧುವನ್ನು ಮನೆಗೆ ಕರೆತರುವುದು; ಶೋಭನ ಪ್ರಸ್ತ.

**गौर** - ವಿ॰ ಬಿಳಿಯ; ಗೌರವರ್ಣದ.

**ग़ौर** - ಪುಂ॰ ಗಮನ; ಲಕ್ಷ್ಯಕೊಟ್ಟು ಗಮನಿಸುವಿಕೆ.

**गौरांग** - ಪುಂ॰ ವಿಷ್ಣು; ಶ್ರೀಕೃಷ್ಣ; ಚೈತನ್ಯ ಮಹಾಪ್ರಭು.

**गौरा** - ಸ್ತ್ರೀ॰ ಗೌರವರ್ಣದ ಸ್ತ್ರೀ; ಪಾರ್ವತಿ; ಅರಸಿನದಹಳದಿ.

**गौरिया** - ಸ್ತ್ರೀ॰ ಒಂದು ಜಾತಿಯ ಕಪ್ಪು ಬಣ್ಣದ ಜಲಪಕ್ಷಿ.

**गौरैया** - ಸ್ತ್ರೀ॰ ಹೆಣ್ಣು ಗುಬ್ಬಚ್ಚಿ.

**गौस** - ಪುಂ॰ ಫಿರಿಯಾದಿ; ದೂರು.

**गौहर** - ಪುಂ॰ ಮುತ್ತು.

**ग्यारस** - ಸ್ತ್ರೀ॰ ಏಕಾದಶಿ ತಿಥಿ.

**ग्रंथ** - ಪುಂ॰ ಪುಸ್ತಕ; ಗ್ರಂಥ; ಹಣ; ಪೋಣಿಸುವಿಕೆ.

**ग्रंथकार** - ಪುಂ॰ ಪುಸ್ತಕಗಳನ್ನು ಬರೆಯುವವನ; ಗ್ರಂಥಕರ್ತ.

**ग्रंथि** - ಸ್ತ್ರೀ॰ ಗಂಟು; ಗ್ರಂಥಿ; ಮಾಯಾಜಾಲ.

**ग्रंथिबंधन** - ಪುಂ॰ ವಧೂವರರ ಸೆರಗಿಗೆ ಗಂಟುಹಾಕುವಿಕೆ.

**ग्रसना** - ಸ॰ ಗಟ್ಟಿಯಾಗಿ ಹಿಡಿದುಕೊಳ್ಳು; ಕಾಡಿಸು.

**ग्रसित** / **ग्रस्त** - ವಿ॰ ಹಿಡಿತಕ್ಕೊಳಗಾದ; ಪೀಡಿಸಲ್ಪಟ್ಟ.

**ग्रहणीय** - ವಿ॰ ಸ್ವೀಕರಿಸಲು ಯೋಗ್ಯವಾದ.

**ग्रामीण** - ವಿ॰ ಹಳ್ಳಿಯವನು; ಗಮಾರ.

**ग्राम्य** - ವಿ॰ ಹಳ್ಳಿಗೆ ಸಂಬಂಧಪಟ್ಟ; ಮೂರ್ಖ; ಅನಾಗರಿಕ.

**ग्रास** - ಪುಂ॰ ಕವಳ; ತುತ್ತು; ಹಿಡಿಯುವಿಕೆ.

**ग्रासना** - ಸ॰ ಹಿಡಿ; ನುಂಗು; ಕಾಡಿಸು.

**ग्राह** - ಪುಂ॰ ಮೊಸಳೆ.

**ग्राहक** - ಪುಂ॰ ಗಿರಾಕಿ; ಖರೀದಿ ಮಾಡುವವ.

**ग्राह्य** - ವಿ॰ ಸ್ವೀಕರಿಸಲು ಯೋಗ್ಯವಾದ; ಮಾನ್ಯವಾದ.

**ग्रीवा** - ಪುಂ॰ ಕೊರಳು; ಕುತ್ತಿಗೆ.

**ग्लानि** - ಪುಂ॰ ದುಃಖ; ಖಿನ್ನತೆ.

**ग्वाल** / **ग्वाला** - ಪುಂ॰ ಗೊಲ್ಲ; ಗೌಳಿಗ.

**ग्वालिन** - ಸ್ತ್ರೀ॰ ಗೊಲ್ಲತಿ; ಗೌಳಗಿತ್ತಿ.

**ग्वैंड़ा** - ಪುಂ॰ ಹಳ್ಳಿಯ ಹತ್ತಿರದ ಹೊಲಗಳು.

## घ

**घँघरा** - ಪುಂ ಲಂಗ; ಪಾವಡೆ.

**घँघराघोर** - ಪುಂ ಮಡಿಮೈಲಿಗೆಯ ಭೇದವಿಲ್ಲದಿರುವಿಕೆ; ಭ್ರಷ್ಟಾಚಾರ.

**घँघरी** - ಸ್ತ್ರೀಂ ದೇಂ घघरी.

**घँघोरना** / **घंघोलना** } ಸಂ ಕಲಸು; ಕದಡು.

**घंटा** - ಪುಂ ಘಂಟೆ; ಒಂದು ದಿನದ ೧/೨೪ ನೇ ಭಾಗ; ಘಂಟೆ ಬಾರಿಸುವ ಧ್ವನಿ;—**दिखाना** - ಆಶೆ ತೋರಿಸಿ ನಿರಾಶೆಮಾಡುವುದು.

**घंटा-घर** - ಪುಂ ಗಡಿಯಾರದ ಗೋಪುರ.

**घंटिका** / **घंटी** } ಸ್ತ್ರೀಂ ಸಣ್ಣಘಂಟೆ; ಗೆಜ್ಜೆ.

**घई** - ಸ್ತ್ರೀಂ ಸುಳಿ; ಸುಳಿಗುಂಡಿ; ಆಧಾರಸ್ತಂಭ; **वि**ಂ ಆಳವಾದ.

**घघरा** - ಪುಂ / **घघरी** - ಸ್ತ್ರೀಂ } ಲಂಗ; ನಿರಿಗೆಯ ಲುಂಗಿ.

**घट** - ಪುಂ ಕಳಶ; ಪಾತ್ರೆ; ಶರೀರ. **क्रिं** ಕಡಿಮೆ; ಇಳಿದು ಹೋದ; —**बढ़** - ಹೆಚ್ಚು ಕಡಿಮೆಯಾಗು.

**घटक** - ಪುಂ ವಿವಾಹಸಂಬಂಧವನ್ನು ನಿಶ್ಚಯಿಸುವವನು; ದಳ್ಳಾಳಿ.

**घटती** - ಸ್ತ್ರೀಂ ನ್ಯೂನತೆ; ಕೊರತೆ; ಕಡಿಮೆ.

**घटना** - ಅಂ ಸಂಭವಿಸು; ಆರೋಪಿಸಲ್ಪಡು; ಕಡಿಮೆಯಾಗು. **ಸ್ತ್ರೀಂ** ಘಟನೆ, ಸಂಭವ.

**घटबढ़** - ಸ್ತ್ರೀಂ ಹೆಚ್ಚುಕಮ್ಮಿ; ನ್ಯೂನಾಧಿಕ್ಯ.

**घटवाई** - ಪುಂ ನದಿಯ ಘಟ್ಟದಲ್ಲಿ ಸುಂಕವನ್ನು ವಸೂಲು ಮಾಡುವವ.

**घटवार** - ಪುಂ ಸುಂಕದವನು; ನಾವಿಕ; ನದಿಯ ಘಟ್ಟದಲ್ಲಿ ಕೂತುಕೊಂಡು ಭಿಕ್ಷೆ ಬೇಡುವ ಬ್ರಾಹ್ಮಣ.

**घटहा** - ಪುಂ ನದೀ ಸುಂಕದವನು; ಈಚೆ ದಡದಿಂದ ಆಚೆದಡಕ್ಕೆ ಹೋಗುವ ದೋಣಿ.

**घटा** - ಸ್ತ್ರೀಂ ಮೇಘಮಾಲೆ; ಸಮೂಹ; ಗುಂಪು.

**घटाटोप** - ಪುಂ ನಾಲ್ಕು ಕಡೆಗಳಿಂದಲೂ ಕವಿಯುತ್ತಿರುವ ಮೋಡಗಳು; ಯಾವುದಾದರೂ ವಸ್ತುವನ್ನು ಪೂರ್ಣವಾಗಿ ಮುಚ್ಚತಕ್ಕ ವಸ್ತ್ರ.

**घटाना** - ಸಂ ಕಳೆ; ಕಡಿಮೆಮಾಡು; ಲೆಕ್ಕಮಾಡಿ ಶಿಲ್ಕುಬಾಕಿ ತೆಗೆ.

**घटाव** - ಪುಂ ನ್ಯೂನತೆ; ಕೊರತೆ; —**बढ़ाव** - ಹೆಚ್ಚುಕಡಿಮೆ.

**घटिका** - ಸ್ತ್ರೀಂ ಗಡಿಯಾರ; ೨೪ ನಿಮಿಷಗಳ ಒಂದು ಗಳಿಗೆ.

**घटित** - **वि**ಂ ನಿರ್ಮಿತವಾದ; ತಯಾರಾದ.

**घटिया** - **वि**ಂ ತುಚ್ಛ; ನೀಚ; ಗಟ್ಟಿಗ.

**घटिहा** - **वि०** ಮೋಸ; ಅಪ್ರಾಮಾಣಿಕ; ದುಷ್ಟ.

**घट्ठा** - **पु०** ಕಾಯಿಕಟ್ಟಿದಕೈ.

**घड़ा** - **पु०** ಜಲಪಾತ್ರೆ; ಗಡಿಗೆ.

**घड़िया** - **स्त्री०** ಮಣ್ಣಿನ ಮಿಳ್ಳೆ.

**घड़ियाल** - **पु०** ಪೂಜಾಕಾಲದಲ್ಲಿ ಬಾರಿಸುವ ಘಂಟೆ; ಮೊಸಳೆ.

**घड़ी** - **स्त्री०** ಗಳಿಗೆ; ಸಮಯ; ಗಡಿಯಾರ; —**घड़ी** - ಪದೇಪದೇ; ಅಡಿಗಡಿಗೆ.

**घड़ीसाज़** - **पु०** ಗಡಿಯಾರವನ್ನು ಸರಿಮಾಡುವವನು.

**घड़ौंची** - **स्त्री०** ನೀರಿನ ಗಡಿಗೆಯನ್ನು ಇಡುವ ಮುಕ್ಕಾಲು ಮಣೆ ಅಥವಾ ಎತ್ತರವಾದ ಸ್ಥಳ.

**घतिया** - **पु०** ಮೋಸಗಾರ; ವಂಚಕ.

**घतियाना** - **स०** ಮೋಸಗೊಳಿಸು; ಕದಿ; ಮರೆಮಾಚು.

**घन** - **पु०** ಮೇಘ; ಸಮೂಹ; ಕರ್ಪೂರ; ಘನಫಲ. **वि०** ಘನವಾದ; ಗಟ್ಟಿ; ದೃಢ.

**घनघनाना** - **अ०** ಘಣಘಣ ಎಂದು ಶಬ್ದವಾಗು.

**घनघनाहट** - **पु०** ಘಣಘಣ ಎಂಬ ಶಬ್ದ.

**घनघोर** - **वि०** ಬಹಳ ದಟ್ಟವಾದ; ಭೀಷಣವಾದ.

**घनचक्कर** - **पु०** ಚಂಚಲ ಬುದ್ಧಿಯವನು; ಮೂರ್ಖ; ಸೋಮಾರಿ.

**घनसार** - **पु०** ಕರ್ಪೂರ.

**घना** - **वि०** ನಿಬಿಡವಾದ; ದಟ್ಟವಾದ.

**घनिष्ठ** - **वि०** ಸಮೀಪದ; ಬಹಳ ಹೆಚ್ಚು; ಗಾಢ.

**घने, घनेरा, घनेरे** - **वि०** ಬಹಳ; ಅನೇಕ; ಅಸಂಖ್ಯ.

**घपचिआना** - **अ०** ಮೋಸದ ಬಲೆಗೆ ಬೀಳು.

**घपची** - **स्त्री०** ಎರಡೂಕೈಗಳ ಹಿಡಿತ.

**घपला** - **पु०** ಅವಾಂತರ; ಗಡಿಬಿಡಿ.

**घपुआ** - **वि०** } ಮೂರ್ಖ; ತಿಳಿಗೇಡಿ.
**घपूचन्द** - **पु०** }

**घबड़ाना** } **अ०** ಗಾಬರಿಗೊಳ್ಳು; ವ್ಯಾಕುಲಪಡು; ತಳಮಳಿಸು;
**घबराना** } ಬೆದರು. **स०** ಕಳವಳಗೊಳಿಸು; ಕಾಡು.

**घबड़ाहट** } **स्त्री०** ಗಾಬರಿ; ವ್ಯಾಕುಲತೆ; ಕಳವಳ.
**घबराहट** }

**घमंड** - **पु०** ಅಹಂಕಾರ; ಹೆಮ್ಮೆ; ಜಂಬ.

**घमंडी** - **वि०** ಅಹಂಕಾರಿ; ಜಂಬಗಾರ.

**घमकना** - **अ०** ಗರ್ಜಿಸುವುದು. **स०** ಮೂದಲಿಸುವುದು.

**घमखोर** - **वि०** ಬಿಸಿಲಿನತಾಪವನ್ನು ಸಹಿಸುವವ.

**घमघमाना** - **अ०** ಗಂಭೀರವಾಗಿ ಶಬ್ದಮಾಡು.

**घमर** - **पु०** ನಗಾರಿ ಢೋಲು ಮೊದಲಾದವುಗಳ ಗಂಭೀರವಾದ ಶಬ್ದ.

**घमसा** - ಪುಂ ಬಸಿಲಿನತಾಪ; ಬೇಗೆ; ಝುಳ.

**घमसान** } ಪುಂ ಭಯಂಕರವಾದ
**घमासान** } ಯುದ್ಧ; ತುಮುಲ ಯುದ್ಧ.

**घर** - ಪುಂ ಮನೆ; ಗೃಹ; ಜನ್ಮಸ್ಥಳ; ವಂಶ; **—उजड़ना** - ಮನೆಯೂ ಮನೆತನವೂ ನಾಶವಾಗು; **—करना** - ವಾಸವಾಗು; **—का** - ಸ್ವಂತದ; **—का न घाट का** - ತ್ರಿಶಂಕು ಸ್ವರ್ಗದ; ಕೆಲಸಕ್ಕೆ ಬಾರದ; **—जवाँई** - ಮಾವನವರ ಮನೆಯಲ್ಲಿ ಉಳಿದ ಅಳಿಯ; **—फूँक तमाशा देखना** - ಐಶ್ವರ್ಯವನ್ನು ಕಳೆದುಕೊಂಡು ವಿಲಾಸ ಪ್ರಿಯನಾಗು; **—बसना** - ಮನೆಯ ಸ್ಥಿತಿಯು ಉತ್ತಮಗೊಳ್ಳು; **—फोड़ना** - ಮನೆಯಲ್ಲಿ ಒಡಕು ಉಂಟುಮಾಡು; **आँख में घर करना** - ಅತ್ಯಂತ ಪ್ರೇಮಪಾತ್ರನಾಗು.

**घरद्वार** - ಪುಂ ಮನೆಮಠ.

**घरघराना** - ಅಂ ಕಫದಿಂದ ಗರ್ ಗರ್ ಎಂದು ಗಂಟಲೊಳಗೆ ಶಬ್ದವಾಗು. ಪುಂ ಪರಿವಾರ; ವಂಶ.

**घरघाल** } ವಿಂ ಮನೆ ಹಾಳು ಮಾ
**घरघालन** } ಡುವ.

**घरजाया** - ಸ್ತ್ರೀಂ ಮನೆ ಗೆಲಸಮಾಡುವವಳು.

**घरनी** - ಸ್ತ್ರೀಂ ಹೆಂಡತಿ; ಮನೆಯಾಕೆ.

**घरफोड़ी** - ಸ್ತ್ರೀಂ ಕುಟುಂಬದಲ್ಲಿ ಜಗಳ ಹುಟ್ಟಿಸುವವಳು; ಘಾತಕಿ.

**घरबार** - ಪುಂ ಮನೆಮಠ.

**घराऊ** - ವಿಂ ಮನೆತನಕ್ಕೆ ಸೇರಿದ.

**घराती** - ಪುಂ ಮದುವೆ ಹೆಣ್ಣಿನ ಕಡೆಯವರು.

**घराना** - ಪುಂ ವಂಶ; ಮನೆತನ.

**घरी** - ಸ್ತ್ರೀಂ ಸೇವಕಿ; ವಿಡತೆಹುಳು.

**घरेलू** - ವಿಂ ಮನೆಯ; ಮನೆಗೆ ಸಂಬಂಧಪಟ್ಟ; ಮನೆತನದ.

**घरैया** - ವಿಂ ಮನೆಯವನು.

**घरौंदा** - ಪುಂ ಕಾಗದ ಮಣ್ಣು ಮುಂತಾದ್ದರಿಂದ ಮಾಡಿದ ಮಕ್ಕಳ ಆಟದ ಮನೆ.

**घर्षण** - ಪುಂ ತಿಕ್ಕಾಟ.

**घलना** - ಅಂ ಕಳಚಿ ಬಿದ್ದುಹೋಗು; ಬಿಸಾಡಲ್ಪಡು; ಹೊಡೆದಾಟವಾಗು.

**घलुआ** - ಪುಂ ಕುಸುರಿ; ಕೊಸರು.

**घसखुदा** - ಪುಂ ಹುಲ್ಲು ಕೀಳುವವನು; ಮೂರ್ಖ; ತಿಳಿಗೇಡಿ.

**घसना** - ಅಂ ತಿಕ್ಕು; ಉಜ್ಜು; ಸವೆಸು.

**घसिटना** - ಅಂ ಎಳೆದುಹೋಗು.

**घसियारा** - ಪುಂ ಹುಲ್ಲು ಮಾರುವವನು.

**घसियारिन** } ಸ್ತ್ರೀಂ ಹುಲ್ಲು ಮಾರುವ
**घसियारी** } ವಳು.

**घसीटना** - ಸಂ ಎಳೆ; ಜಗ್ಗು; ಕೀಳು; ಬೇಗಬೇಗ ಬರೆ.

**घहराना** - ಅಂ ಗುಡುಗು; ಗರ್ಜಿಸು.

**घाँघरा** - पुं० } ನಿರಿಗೆಯು ಪಾವಡೆ;
**घांघरी** - स्त्री० } ಲಂಗ.

**घाँटी** - स्त्री० ಗಂಟಲೊಳಗಿನ ಕೊಳವಿ ಕಂಠನಾಳ.

**घाई** - स्त्री० ಏಟು; ಹೊಡೆತ; ಆಘಾತ.

**घाऊघप** - वि० ಉಪಾಯದಲ್ಲಿ ಗಂಟು ಮುಳುಗಿಸುವವನು; ಕೊತಲ್ಲೇ ಸ್ವಕಾರ್ಯ ಸಾಧಿಸತಕ್ಕವನು.

**घाघ** - पुं० ಗೋಂಡಾ ಪ್ರದೇಶದ ಬಹಳ ಚತುರ ಮನುಷ್ಯ.

**घाघरा** - पुं० ಲಂಗ.

**घाट** - पुं० ಘಟ್ಟ; ರೇವು; ಕಣಿವೆ; ಇಕ್ಕಟ್ಟಾದ ಪರ್ವತಮಾರ್ಗ; ದಿಕ್ಕು. स्त्री० ಮೋಸ; ಕೆಟ್ಟತನ; **—घाट का पानी पीना** - ಅನೇಕ ಊರುಗಳನ್ನು ಸುತ್ತಾಡಿ ಅನೇಕ ವೃತ್ತಿಗಳನ್ನು ಅವಲಂಬಿಸುವುದು.

**घाटा** - पुं० ನಷ್ಟ; ನುಕ್ಸಾನು; **—उठाना** - ನಷ್ಟವನ್ನು ವಹಿಸು; ನಷ್ಟಕ್ಕೀಡಾಗು; **—भरना** - ನಷ್ಟದ ಹಣವನ್ನು ಕೈಯಿಂದ ತುಂಬು.

**घाटि** - पुं० ಕೊರತೆ; ಕಡಿಮೆ. स्त्री० ನೀಚಕಾರ್ಯ.

**घाटिया** - पुं० ನದೀ ಘಟ್ಟದಲ್ಲಿರುವ ಪುರೋಹಿತ.

**घाटी** - पुं० ಇಕ್ಕಟ್ಟಾದ ಪರ್ವತ ಮಾರ್ಗ; ಪರ್ವತದ ಶಿಖರ; ಚಿಕ್ಕಮೈದಾನ.

**घात** - पुं० ಪ್ರಹಾರ; ಹೊಡೆತ; ಹತ್ಯೆ; **—में बैठना** - (ಆಕ್ರಮಣಕ್ಕಾಗಿ) ಕಾದುಕೂತಿರು; ಅವಿತುಕೊಂಡು ಕೂತಿರು; **—लगाना** - ಸಂಧಿಸಾಧಿಸು; **—लगना** - ಸಂಧಿಸಿಗು.

**घातक** } पुं० ಹಿಂಸಕ; ಶತ್ರು.
**घातकी** }

**घान** - पुं० } ಒಂದಾವರ್ತಿ ಬೀಸು
**घानी** - स्त्री० } ಗಲ್ಲಿನಲ್ಲಿಹಾಕಿ ಬೀಸುವಷ್ಟು ಕಾಳು.

**घाम** - पुं० ಬಿಸಿಲು; ಸೂರ್ಯನ ತಾಪ.

**घामड़** - वि० ಮೂರ್ಖ; ಸೋಮಾರಿ; ಬಿಸಿಲಲ್ಲಿ ಬಳಲಿದವನು.

**घाय** - पुं० ಘಾಯ.

**घायक** - वि० ಘಾತಕ; ವಿನಾಶಕ.

**घायल** - वि० ಗಾಯಗೊಂಡವನು.

**घार** - स्त्री० ನೀರಿನ ಪ್ರವಾಹದಿಂದಾದ ಮಾರ್ಗ.

**घाल** - पुं० दे० घलुआ.

**घालक** - पुं० ಕೊಲೆಗಾರ; ವಿನಾಶಕ.

**घालना** - स० ಹಾಕು; ಇಡು; ಎಸೆ; ಮಾಡಿಬಿಡು; ಹಾಳುಮಾಡು.

**घाव** - पुं० ಗಾಯ; **—पर नमक छिड़कना** - ನೊಂದ ಮನಸ್ಸನ್ನು ಮತ್ತಷ್ಟುನೋಯಿಸು; **—भरना, —पूजना** - ಹುಣ್ಣು ಮಾಯುವುದು.

**घास** - स्त्री० ಹುಲ್ಲು.

**घिग्घी** - **स्त्री०** ಬಿಕ್ಕಳಿಕೆ.

**घिघियाना** - **अ०** ಗಡಗಡನೆ ನಡುಗು; ದೈನ್ಯವಾಗಿ ಬೇಡು.

**घिचपिच** } **स्त्री०** ಕಿಕ್ಕಿರಿಯುವಿಕೆ;
**घिचर-पिचर** } ಇಕ್ಕಟ್ಟಾಗುವಿಕೆ.

**घिन** - **स्त्री०** ಜಗುಪ್ಸೆ; ಅಸಹ್ಯ.

**घिनाना** - **अ०** ಅಸಹ್ಯಪಡು.

**घिनौना** - **वि०** ಅಸಹ್ಯವಾದ; ಘೃಣಿತವಾದ.

**घिया** - **पु०** ಸೋರೆಕಾಯಿ; ತುಪ್ಪದ ಹೀರೆ ಕಾಯಿ.

**घिरना** - **अ०** ಆವರಿಸು; ಸುತ್ತುಹಾಕಲ್ಪಡು.

**घिरनी** - **स्त्री०** ಸುತ್ತು; ತಿರಗಣೆ; ಒಂದು ಜಾತಿಯ ಪಾರಿವಾಳ.

**घिराई** - **स्त्री०** ಸುತ್ತು; ತಿರಗುವಿಕೆ; ಆಕಳುಗಳನ್ನು ಮೇಯಿಸುವುದು ಅಥವಾ ಮೇಯಿಸುವ ಮಜೂರಿ.

**घिरायंद** - **पु०** ಕೆಟ್ಟವಾಸನೆ.

**घिराव** - **पु०** ಸುತ್ತು; ಬಳಸು.

**घिसघिस** - **स्त्री०** ಕಾರ್ಯದಲ್ಲಿ ಶಿಥಿಲತೆ; ಗಡಿಬಿಡಿ.

**घिसना** - **स०** ತಿಕ್ಕು; ಸವೆಯಿಸು.

**घिसाई** - **स्त्री०** ತಿಕ್ಕುವಿಕೆ; ತಿಕ್ಕಿದುದರ ಮಜೂರಿ.

**घिसाव** - **पु०** ತಿಕ್ಕಾಟ.

**घी** - **पु०** ತುಪ್ಪ. **पाँचों उँगली घी में होना** - ಎಲ್ಲವಿಧದಲ್ಲೂ ಲಾಭ ಉಂಟಾಗು.

**घीकुआँर** - **पु०** ಲೋಳಿಸರ.

**घुँइयाँ** - **स्त्री०** ಮುಂಡಿಗೆ; ಕೆಸವು.

**घुँघची** - **स्त्री०** ಗುಲಗುಂಜಿ; ಮಂಜೂಟಿ; ಗುಂಜಾಫಲ.

**घुँघनी** - **स्त्री०** ತುಪ್ಪ ಇಲ್ಲವೆ ಎಣ್ಣೆಯಲ್ಲಿ ಹುರಿದ ಕಡಲೆ, ಹೆಸರು ಬಟಾಣಿ ಮುಂತಾದ ಕಾಳು; ಉಸಳಿ; ಹುರಿಗಾಳು.

**घुँघराले** } **वि०** ಉಂಗುರದಂತೆ ಸುರುಳು
**घुँघराले** } ಸುರುಳಾದ; ಗುಂಗುರು.

**घुँघरू** - **पु०** ಕಿರುಗೆಜ್ಜೆ.

**घुंडी** - **स्त्री०** ಗುಂಡಿ; ಬಟನು.

**घुग्घू** - **पु०** ಗೂಗೆ.

**घुघुआना** - **अ०** ಗೂಬೆಯಂತೆ ಕೂಗು.

**घुटकना** - **स०** ಗುಟುಕು ಗುಟುಕಾಗಿ ಕುಡಿ; ನುಂಗು.

**घुटना** - **पु०** ಮೊಣಕಾಲು; ಮಂಡಿ. **अ०** ಉಸಿರು ಕಟ್ಟಿ ಹೋಗು ಅಥವಾ ತಡೆದುಹೋಗು;— **टेकना** - ಮಂಡಿಯೂರಿ ಕೂಡುವುದು.

**घुटन्ना** - **पु०** ಚಡ್ಡಿ; ನಿಕ್ಕರ್.

**घुटवाना** - **स०** ಸಮೆಯಿಸು; ಅರೆಯಿಸು; ಅವುಟಾಯಿಸು; ಬೋಳಿಸು.

**घुटाई** - **स्त्री०** ಅರೆಯುವ ಕೆಲಸ ಅಥವಾ ಅದರ ಮಜೂರಿ.

**घुटाना** - **स०** ಅರೆಯಿಸು.

**घुट्टी** - **स्त्री०** ಚಿಕ್ಕಮಕ್ಕಳಿಗೆ ಹಾಕುವ ಜೀರ್ಣೌಷಧಿ.

**घुड़कना** - ಸಂ ಗದರಿಸು; ದಟ್ಟಿಸು; ಜಬರಿಸು.

**घुड़की** - ಸ್ತ್ರೀಂ ಗದರಣೆ; ಗದರಿಸುವಿಕೆ; ಬೆದರಿಕೆ. **बंदर घुड़की** - ಪುಸಿ ಬೆದರಿಕೆ.

**घुड़दौड़** - ಸ್ತ್ರೀಂ ಕುದುರೆಯ ಓಟ; ಕುದುರೆ ಜೂಜು.

**घुड़सार** } **घुड़साल** } ಸ್ತ್ರೀಂ ಕುದುರೆ ಲಾಯ.

**घुण** } **घुन** } ಪುಂ ಮರ ಮತ್ತು ಧಾನ್ಯಗಳನ್ನು ಕೊರಿಯುವ ಕ್ರಿಮಿ; ಕುಟ್ಟೇಹುಳು.

**घुनना** - ಅಂ ನುಸಿಹಿಡಿ; ಕುಟ್ಟೆಹಿಡಿ.

**घुन्ना** - ವಿಂ ದ್ವೇಷದಿಂದ ಕೇಡು ಬಗೆಯುವವನು.

**घुप** - ವಿಂ ನಿಬಿಡ; ಕಡು ಕತ್ತಲೆ.

**घुमँड़ना** - ಅಂ ದೇಂ **घुमड़ना.**

**घुमक्कड़** - ವಿಂ ಬಹಳ ತಿರುಗಾಡುವವನು.

**घुमटा** - ಪುಂ ತಲೆ ತಿರುಗುವಿಕೆ.

**घुमड़ना** } **घुमड़ाना** } ಅಂ ಮೋಡಕವಿ; ಒಟ್ಟಿಗೆ ಸೇರು.

**घुमनी** - ವಿಂ ಅತ್ತಿತ್ತ ಬಹಳವಾಗಿ ಅಲೆದಾಡುವವನು; ತಿರುಕ.

**घुमरी** - ಸ್ತ್ರೀಂ ನೀರಿನಸುಳಿ; ತಲೆ ತಿರುಗುವಿಕೆ.

**घुमाना** - ಸಂ ಸುತ್ತಲೂ ತಿರುವು; ತಿರುಗಾಡಿಸು; ತಿರುಗಿಸು.

**घुमाव** - ಪುಂ ತಿರುಗಾಟ; ಬೀಸಾಟ.

**घुरघुराना** - ಅಂ ಗಂಟಲು ಕೆರೆ; ಗುರುಗುರು ಎಂಬ ಶಬ್ದವಾಗು.

**घुलना** - ಅಂ ದ್ರವಿಸು; ಕರಗು.

**घुलाना** - ಸಂ ಕರಗಿಸು; ಕೃಶವಾಗುವಂತೆ ಮಾಡು.

**घुलावट** - ಸ್ತ್ರೀಂ ಕರಗಿಸುವಿಕೆ; ಮಿಶ್ರಣ.

**घुसना** - ಅಂ ಪ್ರವೇಶಿಸು; ಹೊಗು; ನುಗ್ಗು.

**घुसाना** } **घुसेड़ना** } ಸಂ ಒಳಕ್ಕೆ ಸೇರಿಸು; ಹೊಗಿಸು.

**घूँघट** - ಪುಂ ಗೋಷಾ; ಮುಸುಕು; ಪರದೆ.

**घूँघर** - ಪುಂ ಗುಂಗುರು ಕೂದಲು.

**घूँघरी** } **घूँघरू** } ಸ್ತ್ರೀಂ ನೂಪುರ; ಕಾಲಿನ ಕಿರುಗೆಜ್ಜೆ.

**घूँट** - ಪುಂ ಗುಟುಕು.

**घूँटना** - ಸಂ ಕುಡಿ.

**घूँसा** - ಪುಂ ಮುಷ್ಟಿಯಹೊಡೆತ; ಗುದ್ದು.

**घूँसेबाजी** - ಸ್ತ್ರೀಂ ಮುಷ್ಟಿಯುದ್ಧ.

**घूटना** - ಸಂ ಉಸಿರು ತಡೆ.

**घूना** - ವಿಂ ಬಹಳ ಜಾಣ; ಚತುರ.

**घूम** - ಸ್ತ್ರೀಂ ಸುತ್ತು; ತಿರುಗು; ದಾರಿಯ ಅಡ್ಡತಿರುಗೋಣ.

**घूमना** - ಅಂ ತಿರುಗು; ತಿರುಗಾಡು; ಹಿಂತಿರುಗು; ಸುತ್ತಾಡು.

**घूमनी** - ಸ್ತ್ರೀಂ ತಲೆ ತಿರುಗುವಿಕೆ.

**घूर** - ಪುಂ ಕಸದಕುಪ್ಪೆ; ತಿಪ್ಪೆಯ ರಾಶಿ.

**घूरना** - ಅಂ ದಿಟ್ಟಿಸಿನೋಡು.

**घूरा** - ಪುಂ ದೇಂ **घूर.**

**घूस** - पु० ಹೆಗ್ಗಣ. **स्त्री०** ಲಂಚ.

**घृणा** - **स्त्री०** ತಿರಸ್ಕಾರ; ಬೇಸರಿಕೆ; ಅಸಹ್ಯ.

**घृणित** - **वि०** ಅಸಹ್ಯಪಡತಕ್ಕ.

**घेंट** - **पु०** ಗಂಟಲು; ಕುತ್ತಿಗೆ.

**घेघा** - **पु०** ಗಂಟಲು.

**घेर** - **पु०** ಪರಿಧಿ; ಸುತ್ತು.

**घेरघार** - **स्त्री०** ನಾಲ್ಕೂಕಡೆಗಳಿಂದ ಸುತ್ತಿಕೊಂಡಿರುವಿಕೆ; ವಿಸ್ತಾರ.

**घेरना** - **स०** ಮುತ್ತು; ಸುತ್ತುವರಿ; ಸುತ್ತುಗಟ್ಟು.

**घेरा** - **पु०** ಪರಿಧಿ; ಸುತ್ತಳತೆ; ಆಕ್ರಮಿಸಿದ ಸ್ಥಳ; ಮುತ್ತಿಗೆ.

**घैला** - **पु०** ಗಡಿಗೆ; ಬಿಂದಿಗೆ.

**घोंघा** - **पु०** ಕಪ್ಪೆಚಿಪ್ಪು; ಬಸವನ ಹುಳ.

**घोंचा** - **पु०** ಗೊಂಚಲು; ಕೊಂಬಿಲ್ಲದ ಎತ್ತು.

**घोंटना** - **स०** ಗುಟುಕು ಗುಟುಕಾಗಿ ಕುಡಿ; ಹಿಸುಕು; ಜೀರ್ಣಿಸು; **गला घोंटना** - ಕತ್ತು ಹಿಸುಕು.

**घोंपना** - **स०** ತುರುಕು; ಗಂಟು ಹಾಕು.

**घोंसला** - **पु०** ಪಕ್ಷಿಗಳ ಗೂಡು.

**घोखना** - **स०** ಬಾಯಿಪಾಠಮಾಡು; ಉರುಹಾಕು.

**घोटना** - **स०** ಉಜ್ಜು; ಅರೆ; ತಿಕ್ಕು; ಅಭ್ಯಾಸಮಾಡು.

**घोटा** - **पु०** ಅರೆಯುವ ಉಪಕರಣ.

**घोटाला** - **पु०** ಗಲಿಬಿಲಿ; ಗೊಂದಲ.

**घोड़सार**, **घोड़साल** } **स्त्री०** ಕುದುರೆಲಾಯ.

**घोड़ा** - **पु०** ಕುದುರೆ;—**बेचकर सोना** - ನಿಶ್ಚಿಂತನಾಗಿ ನಿದ್ರಿಸು.

**घोर** - **वि०** ಕಠಿನವಾದ; ನಿಬಿಡವಾದ; ಮಹಾ; ಅತ್ಯಂತ.

**घोरना**, **घोलना** } **स०** ಕರಗಿಸು.

**घोष** - **पु०** ಗೊಲ್ಲ; ಗೋಶಾಲೆ; ಗರ್ಜನೆ.

**घोषणा** - **स्त्री०** ಬಹಿರಂಗ ಸೂಚನೆ.

**घोसी** - **पु०** ಗೊಲ್ಲ; ಹಾಲುಮಾರುವವನು; ಗೌಳಿಗ.

**घौद** - **पु०** (ಬಾಳೆ) ಹಣ್ಣಿನ ಗೊಂಚಲು, ಗೊನೆ.

**घ्राण** - **स्त्री०** ಮೂಗು; ವಾಸನೆ ನೋಡುವ ಶಕ್ತಿ; ವಾಸನೆ.

## च

**चंग** - **स्त्री०** ಪತಂಗ; ಗಾಳಿಪಟ. **वि०** ಸುಂದರವಾದ;—**पर चढ़ाना** - ಅಲ್ಲಿ ಇಲ್ಲಿಯ ಮಾತುಗಳನ್ನಾಡಿ ಜನರನ್ನು ತನ್ನವಶಕ್ಕೆ ಎಳೆಕೊಳ್ಳು.

**चंगा** - **वि०** ಆರೋಗ್ಯವಾದ; ಶೋಭಿಸುವ; ಸುಂದರ.

**चंगुल** - **पु०** ಪಶುಪಕ್ಷಿಗಳ ಪಂಜ; ಹಿಡಿತ;—**में फँसना** - ಕೈಗೆ ಸಿಕ್ಕಿ ಹೋಗು; ವಶವರ್ತಿಯಾಗು.

**चंगेर**, **चंगेरी** } **स्त्री०** ಹೂ ಬುಟ್ಟಿ.

**चंचरीक** - ಪುಂ ಭ್ರಮರ; ತುಂಬಿ.
**चंचल** - ವಿಂ ಅಸ್ಥಿರ.
**चंचला** - ಸ್ತ್ರೀಂ ಲಕ್ಷ್ಮಿ; ಮಿಂಚು.
**चंचु** / **चंचुपुट** - ಸ್ತ್ರೀಂ ಕೊಕ್ಕು; ಚುಂಚು.
**चंचोरना** - ಸಂ ಹಲ್ಲಿನಿಂದ ಜಿಗಿದು ರಸ ಹೀರುವುದು.
**चंट** - ವಿಂ ಧೂರ್ತ; ದುಷ್ಟ.
**चंड** - ವಿಂ ಘೋರ; ಕಠೋರ.
**चंडाल** - ಪುಂ ಹೊಲೆಯ; ಅಸ್ಪೃಶ್ಯ.
**चंडाल चौकड़ी** - ಸ್ತ್ರೀಂ ಪುಂಡರ ಗುಂಪು.
**चंडू** - ಪುಂ ಅಫೀಮಿನಿಂದ ತಯಾರಾಗುವ ಒಂದು ಬಗೆಯ ಮಾದಕ ದ್ರವ್ಯ. ಇದನ್ನು ಹೊಗೆಯ ರೂಪದಲ್ಲಿ ಕುಡಿಯುತ್ತಾರೆ.
**चंडूखाना** - ಪುಂ ಹೆಂಡದಂಗಡಿ.
**चंडूबाज़** - ಪುಂ ಹೆಂಡಕುಡುಕ.
**चंडोल** - ಪುಂ ಪಲ್ಲಕ್ಕಿ.
**चंद** - ವಿಂ ಕೊಂಚ; ಕೆಲವು.
**चंदन** - ಪುಂ ಚಂದನ; ಗಂಧ.
**चँदराना** - ಸಂ ತಿಳಿದು ತಿಳಿದು ಮೂರ್ಖನಾಗು; ಮಂಕುಮಾಡು.
**चंदला** - ವಿಂ ತಲೆಗೂದಲುದುರಿದ.
**चँदवा** - ಪುಂ ಸಿಂಹಾಸನದ ಮೇಲುಗಡೆಯ ವರ್ತುಲಮಂಟಪ; ನವಿಲುಗರಿ ಕಣ್ಣು.
**चंदा** - ಪುಂ ಚಂದ್ರ; ವರ್ಗಣಿ; ಚಂದಾ; ವಂತಿಗೆ
**चंदिया** - ಸ್ತ್ರೀಂ ತಲೆಯ ಮಧ್ಯಭಾಗ; ನಡುನೆತ್ತಿ; ಚಂದ್ರ.
**चँदोवा** - ಪುಂ ದೇಂ चँदवा.
**चंद्रमा** - ಪುಂ ಚಂದ್ರ.
**चंद्रबिन्दु** - ಪುಂ ಅರ್ಧಾನುಸ್ವಾರದ ಬಿಂದು; ಇದರ ರೂಪ ಹೀಗಿರುತ್ತೆ—ँ.
**चंद्रिका** - ಸ್ತ್ರೀಂ ದೇಂ चाँदनी.
**चंपई** - ವಿಂ ಸಂಪಿಗೆಹೂವಿನಬಣ್ಣದ.
**चंपक** - ಪುಂ ಸಂಪಿಗೆ.
**चंपत** - ವಿಂ ಅಂತರ್ಧಾನವಾದ; ಮಾಯವಾದ.
**चंपना** - ಅಂ ಭಾರದಿಂದ ಕುಗ್ಗು; ನಾಚಿಗೆಯಿಂದ ತಲೆ ಬಗ್ಗಿಸು; ಉಪಕಾರಹೊಂದಿ ನಮ್ರನಾಗು.
**चंपा** - ಪುಂ ಸಂಪಿಗೆ.
**चंपू** - ಪುಂ ಗದ್ಯಪದ್ಯಮಯವಾದ ಕಾವ್ಯ.
**चँवर** - ಪುಂ ಚಾಮರ.
**चँवरदार** - ಪುಂ ಚಾಮರಬೀಸುವ ಸೇವಕ.
**चँवरी** - ಸ್ತ್ರೀಂ ಚೌರಿ; ಕುದರೆಬಾಲದ ಕೂದಲಿನಿಂದಮಾಡಿದ ಚಾಮರ.
**चक** - ಪುಂ ಚಕ್ರವಾಕಪಕ್ಷಿ; ಚಕ್ರ.
**चकई** - ಸ್ತ್ರೀಂ ಹೆಣ್ಣು ಚಕ್ರವಾಕ.
**चकचून** - ವಿಂ ಚೂರುಮಾಡಿದ.
**चकचौंध** - ಸ್ತ್ರೀಂ ದೇಂ चकाचौंध.
**चकती** - ಸ್ತ್ರೀಂ ಚರ್ಮ, ವಸ್ತ್ರಮುಂತಾದ್ದರಿಂದ ಕತ್ತರಿಸಿ ತೆಗೆದಪಟ್ಟಿ; ದುಂಡಗಿನ ಅಥವಾ ಚೌಕವಾದ ಚಿಂದಿಚೂರು.

**चकत्ता** - ಪುಂ ಮೈಮೇಲಿನ ಅಗಲವಾಗಿ ದುಂಡಗಿರುವ ಮಚ್ಚೆ; ಕಲೆ; ಹಲ್ಲಿನಗಾಯ.

**चकनाचूर** - ವಿಂ ಚೂರುಚೂರಾದ; ಪುಡಿಪುಡಿಯಾದ.

**चकपक** - ವಿಂ ಚಕಿತ; ಸ್ತಂಭಿತವಾದ.

**चकपकाना** - ಅಂ ಚಕಿತನಾಗು.

**चकफेरी** - ಸ್ತ್ರೀಂ ಪ್ರದಕ್ಷಿಣೆ; ಸುತ್ತು.

**चकबंदी** - ಸ್ತ್ರೀಂ ಜಮೀನಿನ ಚಕ್ಕುಬಂದಿ; ಮೇರೆ.

**चकबस्त** - ಸ್ತ್ರೀಂ ಜಮೀನಿನ ಚಕ್ಕುಬಂದಿ; ಕಾಶ್ಮೀರ ಬ್ರಾಹ್ಮಣರಲ್ಲಿ ಒಂದು ಭೇದ.

**चकमक** - ಪುಂ ಚಕಮುಕಿ ಕಲ್ಲು.

**चकमा** - ಪುಂ ಮೋಸ; ಚಕ್ಕರ್; ಹಾನಿ.

**चकमाकी** - ವಿಂ ಚಕಮುಕಿಯಿರುವ; ಸ್ತ್ರೀಂ ಬಂದೂಕು.

**चकरा** - ಪುಂ ನೀರಿನಸುಳಿ. ವಿಂ ಅಗಲ; ವಿಸ್ತಾರ.

**चकराना** - ಅಂ ತಲೆತಿರುಗು; ಚಕಿತನಾಗು.

**चकरानी** - ಸ್ತ್ರೀಂ ಸೇವಕಿ.

**चकरी** - ಸ್ತ್ರೀಂ ಬೀಸುಗಲ್ಲು; ಬೀಸುಗಲ್ಲಿನ ಅರ್ಧಭಾಗ.

**चकला** - ಪುಂ ರೊಟ್ಟಿ ಮಣೆ; ಅನೇಕ ಹಳ್ಳಿಗಳು ಅಥವಾ ಪಟ್ಟಣಗಳಿರುವ ಇಲಾಖೆ.

**चकलाना** - ಸಂ ಅಗಲಮಾಡು.

**चकली** - ಸ್ತ್ರೀಂ ಚಂದನ ತೇಯುವ ಕಲ್ಲು ಮಣೆ.

**चकलेदार** - ಪುಂ ಕಂದಾಯ ವಸೂಲು ಮಾಡುವ ಅಧಿಕಾರಿ ಅಥವಾ ಇಲಾಖೆಯ ಮುಖ್ಯಾಧಿಕಾರಿ.

**चकवा** - ಪುಂ ಚಕ್ರವಾಕ.

**चकाचौंध** } ಸ್ತ್ರೀಂ ಪ್ರಕಾಶವು ಬಹಳ
**चकाचौंधी** } ಹೆಚ್ಚಾದಾಗ ಉಂಟಾಗುವ ಕಣ್ಣು ಕುಕ್ಕು ಅಥವಾ ತಳತಳಿ.

**चकाबू** - ಪುಂ ಚಕ್ರವ್ಯೂಹ; ಚಿತ್ರ ಸಮಸ್ಯೆ.

**चकित** - ವಿಂ ಆಶ್ಚರ್ಯಯುಕ್ತ; ವಿಸ್ಮಯಗೊಂಡ.

**चकोटना** - ಸಂ ಜಿಗುಟು; ನುಲಿ.

**चकोतरा** - ಪುಂ ಚಕ್ಕೋತದ ಹಣ್ಣು; ಗಜನಿಂಬೆ.

**चकोर** - ಪುಂ } ಚಕೋರಪಕ್ಷಿ.
**चकोरी** - ಸ್ತ್ರೀಂ }

**चकोह** - ಪುಂ ನೀರಿನ ಸುಳಿ.

**चक्कर** - ಪುಂ ಚಕ್ರ; ಗಾಲಿ; ಪ್ರದಕ್ಷಿಣೆ; ಅಲೆಯುವಿಕೆ; ಸುಳಿ; ಜಂಜಾಲ; ಚಕ್ರದಂತೆ ತಿರುಗುವುದು; ಅತ್ತಿತ್ತ ಅಲೆದಾಡು;—**में आना** - ಆಶ್ಚರ್ಯ ಮಗ್ನನಾಗು; ಭ್ರಮೆಗೊಳ್ಳು; —**लगाना** - ಸುತ್ತಾಡು; ಅಲೆ.

**चक्की** - ಸ್ತ್ರೀಂ ಬೀಸುವ ಕಲ್ಲು;—**रहाना** - ಬೀಸುವ ಕಲ್ಲಿಗೆ ಮುಳ್ಳು ಹಾಕಿಸುವುದು.

चक्कू - पुं० दे० चाक़ू.
चक्रवात - पुं० ಸುಳಿಗಾಳಿ.
चक्षु / चख } पुं० ಕಣ್ಣು.
चखाना - स० ರುಚಿನೋಡು; ತಿನ್ನು.
चख-चख - स्त्री० ಜಗಳ; ಗಲಭೆ.
चखाचखी - स्त्री० ವೈರ; ಹಗೆತನ; ವಿರೋಧ.
चखाना - स० ರುಚಿನೋಡಿಸು; ತಿನ್ನಿಸು.
चगड़ - वि० ಜಾಣ.
चचा - पुं० ತಂದೆಯ ಸಹೋದರ; ಚಿಕ್ಕಪ್ಪ; ದೊಡ್ಡಪ್ಪ.
चचींड़ा - पुं० ಪಡವಲಕಾಯಿ.
चची - स्त्री० ತಂದೆಯ ಸಹೋದರನ ಹೆಂಡತಿ; ಚಿಕ್ಕಮ್ಮ; ದೊಡ್ಡಮ್ಮ.
चचेरा - वि० ತಂದೆಯ ಸಹೋದರನ ಕಡೆಯ ಸಂಬಂಧದ.
चचोड़ना - स० ಚೀಪು; ಹೀರು.
चट - क्रि० ಬೇಗನೆ; ಶೀಘ್ರ. पुं० ಕಳೆ; ದೋಷ;—से - ತತ್‌ಕ್ಷಣವೇ.
चटक - पुं० ಗುಬ್ಬಿ; ಗುಬ್ಬಚ್ಚಿ. स्त्री० ಥಳಕು; ಹೊಳಪು; ಕಾಂತಿ.
चटकमटक - पुं० ಸಿಂಗಾರಸಡಗರ.
चटकना - अ० ಬಿರಿ; ರೇಗು; ನೆಟಕೆ ಮುರಿ.
चटकनी - स्त्री० ಬಾಗಿಲಿನ ಅಗುಳಿ.
चटकाना - स० ಬಿರಿಸು; ಕೋಪವನ್ನುಂಟುಮಾಡು.
चटकारा - वि० ಹೊಳೆಯುವ; ಚಂಚಲವಾದ.
चटकाहट - स्त्री० ಚಟ್ಟನೆ ಮುರಿಯುವ ಅಥವಾ ಬಿರಿಯುವ ಶಬ್ದ.
चटकीला - वि० ಥಳಥಳಿಸುವ.
चटखनी - स्त्री० दे० चटकनी.
चटचटाना - अ० ಚಟಚಟನೆ ಮುರಿ.
चटनी - स्त्री० ಚಟ್ನಿ; ಚಟ್ಟಣಿ.
चटपटा - वि० ತೀಕ್ಷ್ಣರುಚಿಯುಳ್ಳ.
चटपटाना - अ० ಬಹಳ ಅವಸರಪಡು; ತವಕಿಸು; ಆತುರಗೊಳ್ಳು.
चटपटी - स्त्री० ಆತುರ; ಅವಸರ; ವ್ಯಾಕುಲ.
चटशाला / चटसार / चटसाल } स्त्री० ಪಾಠಶಾಲೆ; ಚಿಕ್ಕ ವಿದ್ಯಾಲಯ; ಕೂಲಿಮಠ.
चटाई - स्त्री० ಚಾಪೆ.
चटाचट - वि० ಬಹಳ ಬೇಗನೆ.
चटाना - स० ನೆಕ್ಕಿಸು; ಸ್ವಲ್ಪ ಸ್ವಲ್ಪವಾಗಿ (ಬೇರೆಯವರ) ಬಾಯೊಳಗೆ ಹಾಕು; ಸಾಣೆಹಿಡಿಸು.
चटावन - पुं० ಅನ್ನಪ್ರಾಶನೆ.
चटियल - वि० ಗಿಡಮರಗಳಿಲ್ಲದ ಪ್ರದೇಶ.
चटापटी - स्त्री० ಅವಸರ; ಭರ.
चटु - पुं० ಮುಖಸ್ತುತಿ; ಪ್ರಿಯವಾಕ್ಯ.
चटुल - वि० ಚಪಲ; ಚಂಚಲ.

**चटोरा** - ವಿ० ಜಿಹ್ವಾಚಾಪಲ್ಯವುಳ್ಳ; ರುಚಿಗೆ ಮನಸೋತ.

**चट्टान** - ಸ್ತ್ರೀ० ದೊಡ್ಡಬಂಡೆ; ಶಿಲಾ ಖಂಡ.

**चट्टी** - ಸ್ತ್ರೀ० ಬೀಡು; ಪಾಳಯ; ಹಿಮ್ಮಡಿಯ ಭಾಗವು ತೆರೆದಿರುವ ಜೋಡು; ಚಪ್ಪಲಿ.

**चट्टू** - ವಿ० ಹೊಟ್ಟೆಬಾಕ.

**चड्डा** - ವಿ० ಮೂರ್ಖ.

**चड्डी** - ಸ್ತ್ರೀ० ಒಂದು ವಿಧವಾದ ಲಂಗೋಟಿ; ಚಡ್ಡಿ.

**चढ़त** - ಸ್ತ್ರೀ० ದೇವರಿಗೆ ಅರ್ಪಿಸಿದ ಕಾಣಿಕೆ; ಹೆಣ್ಣಿನ ಮನೆಗೆ ಹೋಗುವ ದಿಬ್ಬಣ.

**चढ़ता** - ವಿ० ಏರುತ್ತಿರುವ; ಹತ್ತುವ.

**चढ़ना** - ಅ० ಏರು; ಹತ್ತು; ಮೀರು.

**चढ़ाई** - ಸ್ತ್ರೀ० ಹತ್ತುವಿಕೆ; ಆಕ್ರಮಣ; ದಂಡಯಾತ್ರೆ.

**चढ़ा-उतरी** - ಸ್ತ್ರೀ० ಅಡಿಗಡಿಗೆ ಹತ್ತುವಿಕೆ ಮತ್ತು ಇಳಿಯುವಿಕೆ.

**चढ़ा-ऊपरी** } **चढ़ा-चढ़ी** } ಸ್ತ್ರೀ० ಪಂದ್ಯಾಟ; ಸ್ಪರ್ಧೆ; ಪೈಪೋಟಿ.

**चढ़ाना** - ಸ० ಏರಿಸು; ಹತ್ತಿಸು; ಅರ್ಪಿಸು.

**चढ़ाव** - ಪು० ಹತ್ತುವಿಕೆ; ಉನ್ನತಿ; **—उतार** - ಏರಿಳಿತ; ಎತ್ತರತಗ್ಗು; ಹಳ್ಳದಿಣ್ಣೆ.

**चढ़ावा** - ಪು० ಮದುವೆ ದಿವಸ ವರನ ಕಡೆಯವರು ವಧುವಿಗೆ ತೊಡಿಸತಕ್ಕ ಆಭರಣ; ದೇವರಿಗೆ ಅರ್ಪಿಸುವ ಕಾಣಿಕೆ.

**चतुर** - ವಿ० ಗಟ್ಟಿಗ; ಸಮರ್ಥ.

**चतुरता** } **चतुराई** } ಸ್ತ್ರೀ० ಯುಕ್ತಿ; ಸಾಮರ್ಥ್ಯ; ಚಾತುರ್ಯ.

**चद्दर** - ಸ್ತ್ರೀ० ದೇ० चादर.

**चना** - ಪು० ಕಡಲೆ; **—लोहे का चना चबाना** - ಅತಿಕಠಿಣ ಕಾರ್ಯಕ್ಕೆ ಕೈಹಾಕು.

**चपकन** - ಸ್ತ್ರೀ० ಒಂದು ವಿಧವಾದ ಅಂಗಿ.

**चपकना** - ಅ० ದೇ० चिपकना.

**चपकुलिस** - ಸ್ತ್ರೀ० ಅಡಚಣೆ; ಕಷ್ಟ; ಬಿಕ್ಕಟ್ಟಿನಸ್ಥಿತಿ.

**चपटा** - ಸ್ತ್ರೀ० ದೇ० चिपटा.

**चपड़-चपड़** - ಸ್ತ್ರೀ० ನೀರುಕುಡಿಯುವಾಗ ಅಥವಾ ಏನಾದರೂ ತಿನ್ನುವಾಗ ನಾಯಿಯ ಬಾಯಿಯಿಂದ ಹೊರಡುವ ಶಬ್ದ.

**चपड़ा** - ಪು० ಅರಗು.

**चपत** - ಪು० ಕೆನ್ನೆ ಅಥವಾ ತಲೆಯ ಮೇಲೆ ಹಾಕತಕ್ಕ ಅಂಗೈಯ ಏಟು.

**चपना** - ಅ० ಕುಗ್ಗಿ ಹೋಗು; ನಾಚಿಕೆಪಡು; ನಾಶವಾಗು.

**चपरगट्टू** - ವಿ० ನಾಶಕರ; ಭಾಗ್ಯ.

**चपरना** - ಅ० ಪರಸ್ಪರ ಸೇರು.

**चपराना** - ಸ० ಸುಳ್ಳೆನಿಸುವುದು; ಸಟೆಯಾಗಿಸುವುದು.

**चपरास** - ಸ್ತ್ರೀ० ಜವಾನರು ಕಾಲಾಳುಗಳು ಅಥವಾ ಸಿಪಾಯಿಗಳು ತೊಟ್ಟುಕೊಳ್ಳುವ ಲೋಹದ ಬಿಲ್ಲೆ.

**चपरासी** - पुं० ಜವಾನ; ಪ್ಯಾದ; ಸಿಪಾಯಿ.

**चपरि** - क्रि० ಜಾಗ್ರತೆ; ಸ್ಫೂರ್ತಿಯಿಂದ.

**चपल** - वि० ಕ್ಷಣಿಕವಾದ; ಅಸ್ಥಿರವಾದ.

**चपला** - वि० ಬಹಳ ಚುರುಕಾದ. स्त्री० ಲಕ್ಷ್ಮಿ; ವಿದ್ಯುತ್; ವ್ಯಭಿಚಾರಿಣಿ.

**चपली** - स्त्री० ಜೋಡು; ಹಿಮ್ಮಡಿಯ ಭಾಗವು ತೆರೆದಿರುವ ಮೆಟ್ಟು.

**चपाती** - स्त्री० ತೆಳುವಾದ ರೊಟ್ಟಿ.

**चपाना** - स० ಹಗ್ಗಗಂಟುಹಾಕು; ಕುಗ್ಗಿಸು; ನಾಚಿಕೆಪಡಿಸು.

**चपेट** - पुं० ಅಂಗೈಯೇಟು; ಹೊಡೆತ; ಆಘಾತ.

**चपेटना** - स० ದಬಾಯಿಸು; ಕುಗ್ಗಿಸು.

**चपेटा** - पुं० दे० चपेट.

**चप्पड़** - पुं० ಮರದತೊಗಟೆ.

**चप्पल** - पुं० ಒಂದು ಬಗೆಯ ಪಾದರಕ್ಷೆ; ಜೋಡು.

**चप्पा** - पुं० ನಾಲ್ಕನೆಯ ಭಾಗ; ಸ್ವಲ್ಪವಾದ ಭೂಭಾಗ.

**चप्पू** - पुं० ದೋಣಿನಡಿಸುವ ಹುಟ್ಟು ಅಥವಾ ದಂಡಕೋಲು.

**चफाल** - स्त्री० ನೀರು, ಕೆಸರುಗಳಿಂದ ಆವರಿಸಿದ ದ್ವೀಪ.

**चबाना** - स० ಹಲ್ಲಿನಿಂದ ಅಗಿ; ಮೆಲ್ಲು; ನೆಮಲು ಹಾಕು.

**चबूतरा** - पुं० ಜಗಲಿಕಟ್ಟೆ; ದೊಡ್ಡ ವಿಶ್ರಾಂತಿ ಕಟ್ಟೆ.

**चबेना** - पुं० ಹುರಿಗಡಲೆ; ಹುರಿಗಾಳು.

**चबेनी** - स्त्री० ಫಲಹಾರದ ತಿನಸು; ತಿಂಡಿ.

**चभाना** - स० ಉಣಿಸು.

**चभोरना** - स० ಮುಳುಗಿಸು; ಒದ್ದೆ ಮಾಡು.

**चमक** - पुं० ಪ್ರಕಾಶ; ಕಾಂತಿ; ಹೊಳಪು.

**चमक-दमक** - स्त्री० ಥಳುಕುಬೆಳಕು; ಸೊಬಗುಸಿಂಗಾರ.

**चमकदार** - वि० ಹೊಳೆಯುವ; ಪ್ರಕಾಶಮಾನವಾದ.

**चमकना** - अ० ಪ್ರಕಾಶಿಸು; ಹೊಳೆ.

**चमकाना** - स० ಹೊಳೆಯಿಸು; ಬೆಳಗಿಸು.

**चमकीला** - वि० ಹೊಳೆಯುವಂಥಾ.

**चमगीदड़** - पुं० ಗಬ್ಬಿಲ; ಬಾವಲಿ.

**चमचम** - वि० दे० चमाचम.

**चमचमाना** - अ० दे० चमकना.

**चमचा** - पुं० ಚಿಕ್ಕಸೌಟು; ಚಮಚೆ.

**चमची** - स्त्री० ಚಿಕ್ಕಚಮಚೆ.

**चमजूई** - स्त्री० ಅಂಟಿದವೇಲೆ ಬಿಡದ ಉಣ್ಣಿ ಜಾತಿಯ ಕ್ರಿಮಿ.

**चमड़ा** - पुं० } ಚರ್ಮ; ತೊಗಲು;
**चमड़ी** - स्त्री० } ಚಕ್ಕಳ.

**चमत्कार** - पुं ವಿಚಿತ್ರವಾದ ಕೆಲಸ; ಅದ್ಭುತಕಾರ್ಯ.

**चमन** - पुं ಹೂದೋಟ; ಉದ್ಯಾನ.

**चमर** - पुं ಚಾಮರ.

**चमरख** - स्त्री० ಚರಕದ ಸೂಜಿಗೆ ಜೋಡಿಸಿಡುವ ಚರ್ಮದ ಅಥವಾ ಮೌಂಜೀ ಹುಲ್ಲಿನ ಕಿವಿ.

**चमरी** - स्त्री० ಚಮರಿ ಮೃಗ; ಚಾಮರ.

**चमरौटी** - स्त्री० ಅಂತ್ಯಜರಹಟ್ಟಿ.

**चमला** - पुं ಭಿಕ್ಷಾಪಾತ್ರೆ.

**चमाचम** - वि० ಥಳಥಳನೆ; ಕಾಂತಿ ಯುತವಾಗಿ.

**चमार** - पुं ಮೊಚ್ಚಿಗಾರ; ಚಮಾರ.

**चमू** - स्त्री० ಸೈನ್ಯ; ದಂಡು.

**चमेली** - स्त्री० ಮಲ್ಲಿಗೆ.

**चमोटा** - पुं ಕ್ಷೌರದಕತ್ತಿಯನ್ನು ಮಸೆಯುವ ತೊಗಲಿನ ಪಟ್ಟಿ.

**चमोटी** - स्त्री० ಬಾರುಕೋಲು; ಕೊರಡ.

**चम्मच** - पुं दे० **चमचा.**

**चयन** - पुं ಸಂಗ್ರಹ; ರಾಶಿ; ಕೋಟೆ; ಚಾಕಿ.

**चर** - पुं ದೂತ; ಜೀವಜಂತು. वि० ಅಸ್ಥಿರವಾದ.

**चरई** - स्त्री० ಕಲಗಚ್ಚಿನ ಬಾನೆ; ತೊಟ್ಟಿ.

**चरक** - पुं ದೂತ; ಚಾಕರ; ಗೂಢ ಚಾರ; ಆಯುರ್ವೇದ ವಿದ್ಯೆಯ ಒಬ್ಬ ಆಚಾರ್ಯ.

**चरक** - पुं ಚಿಕ್ಕಘಾಯ; ನಷ್ಟ; ಮೋಸ.

**चरख** - पुं ಚಕ್ರ; ಗಾಲಿ; ತಿರಗಣಿ.

**चरखा** - पुं ಚರಕ; ರಾಟಿ.

**चरखी** - स्त्री० ಚಿಕ್ಕರಾಟಿ.

**चरचराना** - अ० ಚರ್‌ಚರ್‌ಎಂದು ಸದ್ದಾಗು.

**चरचा** - स्त्री० दे० **चर्चा.**

**चरणोदक** - पुं ಚರಣಾಮೃತ.

**चरन** - पुं ಪಾದ.

**चरना** - स० ಮೇಯು. (ದನ)

**चरनि** - स्त्री० ನಡೆಯುವಿಕೆ; ಗಮನ.

**चरनी** - स्त्री० ಪಶುಗಳಿಗೆ ಮೇವು ಹಾಕುವ ಕಟ್ಟೆ; ದೊಡ್ಡಿ.

**चरपरा** - वि० ತೀಕ್ಷ್ಣವಾದ ರುಚಿ ಯುಳ್ಳ; ಚುರುಕಾದ.

**चरब** - वि० ಜಿಡ್ಡಾದ; ಚುರುಕಾದ.

**चरबा** - पुं ಪ್ರತಿ; ನಕಲು; ನಕಲು ತೆಗೆಯುವ ಕಾಗದ.

**चरबाक** - पुं ಚತುರ; ಚಂಚಲ.

**चरबी** - स्त्री० ಕೊಬ್ಬು; ಚರ್ಬಿ; ಮೇದಸ್ಸು.

**चरम** - वि० ಅಂತಿಮ; ಕೊನೆಯ; ಅತ್ಯಂತ.

**चरमकाल** - स्त्री० ಅಂತ್ಯಕಾಲ.

**चरमसीमा** - स्त्री० ತುಟ್ಟತುದಿ; ಎಲ್ಲೆ; ಮಿತಿ.

**चरवाई** - स्त्री० ದನದಮೇವು.

**चरवाहा** - पुं ದನಮೇಯಿಸುವ ವನು.

**चरवाही** - ಸ್ತ್ರೀ० ದನಮೇಯಿಸುವಿಕೆ ಅಥವಾ ಮೇಯಿಸಿದ ಮಜೂರಿ.

**चरस** - ಪು० ಚರ್ಮದ ಚೀಲ; ಒಂದು ಮಾದಕ ಪದಾರ್ಥ.

**चरसा** - ಪು० ಭೂಮಿಯ ಅಳತೆ.

**चरसी** - ಪು० ಕಪಿಲೆಯಿಂದ ನೀರೆಳೆಯುವವನು

**चराई** - ಸ್ತ್ರೀ० ಮೇಯುವಿಕೆ; ಮೇಯಿಸುವಿಕೆ ಅಥವಾ ಮೇಯಿಸಿದ ಮಜೂರಿ.

**चरागाह** - ಪು० ದೇ० चरनी.

**चरना** - ಸ० ಮೇಯು; ಮೋಸ ಮಾಡು.

**चरिंदा** - ಪು० ಹುಲ್ಲು ತಿನ್ನುವ ಪಶು.

**चरित** - ಪು० ಆಚರಣೆ; ಕೃತ್ಯ; ಜೀವನ ಚರಿತ್ರೆ.

**चरितार्थ** - ವಿ० ಕೃತಾರ್ಥ; ಕೃತಕೃತ್ಯ.

**चरित्तर** - ಪು० ಧೂರ್ತತೆ; ದಿಟ್ಟತನ.

**चरित्र** - ಪು० ಸ್ವಭಾವ; ಜೀವನ ಚರಿತ್ರೆ; ಕೃತ್ಯ.

**चरित्रवान** - ವಿ० ನೈತಿಕಬಲವುಳ್ಳ.

**चरी** - ಸ್ತ್ರೀ० ಮೇವಿನಬೀಡು; ದಾಸಿ; ಕೂಲಿಯವಳು.

**चरेरा** - ವಿ० ಕಠಿಣವಾದ; ಒರಟಾದ.

**चर्ख** - ಪು० ಆಕಾಶ; ಭಾಗ್ಯ; ಚಕ್ರ.

**चर्खा** - ಪು० ದೇ० चरखा.

**चर्खी** - ಸ್ತ್ರೀ० ದೇ० चरखी.

**चर्चा** - ಪು० ವರ್ಣನೆ; ಚರ್ಚೆ.

**चर्पट** - ಪು० ಅಂಗೈ ಏಟು.

**चर्परा** - ವಿ० ದೇ० चरपरा.

**चर्बी** - ಸ್ತ್ರೀ० ದೇ० चरबी.

**चर्राना** - ಅ० ವಾತರೋಗದಿಂದ ನೋವಾಗು.

**चर्स** - ಪು० ದೇ० चरस.

**चल** - ವಿ० ದೇ० चंचल.

**चलचलाव** - ಪು० ಸಾಯುವುದು; ಹೊರಹೊರಡುವುದು.

**चलता** - ವಿ० ನಡೆಯುತ್ತಿರುವ; ಚಲಾವಣೆಯಲ್ಲಿರುವ.

**चलतापुर्जा** - ವಿ० ಕಾರ್ಯದಕ್ಷ.

**चलता-फिरता** - ವಿ० ಅಲೆದಾಡುವ.

**चलती** - ಸ್ತ್ರೀ० ಅಧಿಕಾರ; ಮರ್ಯಾದೆ; ಸ್ಥಾನಮಾನ.

**चलन** - ಪು० ಗತಿ; ನಡವಳಿಕೆ; ಪದ್ಧತಿ; ವರ್ತನೆ.

**चलनसार** - ವಿ० ಚಲಾವಣೆಯಲ್ಲಿರುವ; ನಡೆವಳಿಕೆಯಲ್ಲಿರುವ; ಬಾಳಿಕೆ ಬರುವ.

**चलना** - ಅ० ಹೋಗು; ಹೊರಡು; ನಡೆದು ಹೋಗು; ಚಲಿಸು. **पेट चलना** - ಭೇಧಿಯಾಗು. **चल बसना** - ಸಾಯು.

**चलनी** - ಸ್ತ್ರೀ० ಜಲ್ಲಡೆ.

**चलविचल** - ವಿ० ಅವ್ಯವಸ್ಥಿತ; ಸ್ಥಾನಭ್ರಷ್ಟವಾದ; ಕ್ರಮತಪ್ಪಿದ.

**चलाऊ** - ವಿ० ಬಾಳಿಕೆ ಬರುವಂಥಾ; ಗಟ್ಟಿಯಾದ.

चलाचली - स्त्री० ಹೊರಡುವ ಅವಸರ ಅಥವಾ ಗಡಿಬಿಡಿ.

चलान - स्त्री० ಕಳುಹಿಸಲ್ಪಡುವಿಕೆ ಅಥವಾ ಹೋಗುವಿಕೆ; ಕಳಹಿಸುವಿಕೆ ಅಥವಾ ನಡೆಸುವಿಕೆ; ಅಪರಾಧಿಯನ್ನು ಪತ್ತೆಮಾಡಿ ಕಛೇರಿಗೆ (ನ್ಯಾಯಾಲಯಕ್ಕೆ) ಕಳುಹಿಸುವಿಕೆ.

चलाना - स० ನಡೆಯಿಸು; ಚಲಾಯಿಸು.

चलायमान - वि० ಚಂಚಲ; ವಿಚಲಿತವಾದ.

चलावा - पु० ರಿವಾಜು; ನಡೆವಳಿಕೆ; ಪದ್ಧತಿ.

चलित - वि० ಸ್ಥಿರವಲ್ಲದ.

चवन्नी - स्त्री० ನಾಲ್ಕಾಣೆಯನಾಣ್ಯ; ಪಾವಲಿ; ರೂಪಾಯಿನ ನಾಲ್ಕನೇ ಒಂದಂಶ.

चवाई - पु० ನಿಂದಕ; ಅಪಕೀರ್ತಿಯನ್ನು ಹರಡುವವನು.

चवाव - पु० ಗಾಳಿಸುದ್ದಿ; ಅಪಕೀರ್ತಿ; ಅಪವಾದ.

चशमा - स्त्री० दे० चश्मा.

चश्म - स्त्री० ಕಣ್ಣು; ನೇತ್ರ;— दीद - ಪ್ರತ್ಯಕ್ಷವಾಗಿ ಕಂಡ;— नुमाई - ಕಣ್ಣು ಬೆದರಿಕೆ;— पाशी - ಕಣ್ಣಿಗೆ ಕಾಣಿಸದಂತೆ ತಪ್ಪಿಸಿಕೊಳ್ಳುವುದು.

चश्मक - स्त्री० ಮನಃಕಷಾಯ.

चश्मा - पु० ಕನ್ನಡಕ; ಸುಲೋಚನ; ನೀರಿನ ಬುಗ್ಗೆ; ಚಿಕ್ಕನದಿ.

चषक - पु० ಮದ್ಯದ ಪಾನಪಾತ್ರೆ; ಮಧು; ಜೇನುತುಪ್ಪ.

चसक - स्त्री० ಸಿಡಿನೋವು; ಚಳುಕು.

चसकना - अ० ನೋಯು.

चसका - पु० ರುಚಿ; ಚಟ.

चसमाँ - वि० ಅಂಟಿಸಿರುವ.

चस्पा - वि० ಅಂಟಿಸಿದ; ಹಚ್ಚಿದ.

चह - पु० ನದಿಯ ದಡದಲ್ಲಿ ನಾವೆಯನ್ನು ಹತ್ತಲು ಮಾಡಿರುವ ಕಟ್ಟೆ.

चहक - स्त्री० ಪಕ್ಷಿಗಳ ಚಿಲಿಪಿಲಿಯೆಂದು ಮಾಡುವ ಶಬ್ದ.

चहकना - अ० ಚಿಲಿಪಿಲಿಗುಟ್ಟು.

चहका - पु० ಇಟ್ಟಿಗೆ ಅಥವಾ ಕಲ್ಲಿನ ಜಗಲಿ; ಉರಿಯುತ್ತಿರುವ ಕಟ್ಟಿಗೆ.

चहचहा - पु० ಚಿಲಿಪಿಲಿಗುಟ್ಟುವಿಕೆ; ನಗೆಚಾಟ; ತಮಾಶೆ.

चहबचा - पु० ಕೊಳೆನೀರಿನ ಗುಂಡಿ; ಚರಂಡಿ; ಮೋರಿ; ನೆಲಮಾಳಿಗೆ.

चहल - स्त्री० ಕೆಸರು; ಆನಂದ; ವೈಭವ.

चहलकदमी - स्त्री० ಮೆಲ್ಲಮೆಲ್ಲನೆ ನಡೆಯುವಿಕೆ.

चहलपहल - स्त्री० ಕೋಲಾಹಲ; ಆನಂದೋತ್ಸವ.

चहला - पु० ಕೆಸರು; ಕೊಚ್ಚೆ.

**चहली** - **स्त्री०** ಬಾವಿಯಿಂದ ನೀರು ಸೇದುವ ರಾಟೆ; ಚರ್ಕಿ.

**चहार** - **वि०** ನಾಲ್ಕು;—**दीवार** - **स्त्री०** ಪ್ರಾಕಾರ; ಸುತ್ತುಗೋಡೆ.

**चहारशंबा** - **पु०** ವಾರದಲ್ಲಿ ನಾಲ್ಕನೆಯದಿನ; ಬುಧವಾರ.

**चहारुम** - **वि०** ನಾಲ್ಕನೆಯ.

**चहुँओर** - **क्रि०** ನಾಲ್ಕೂಕಡೆ.

**चहेता** - **वि०** ಪ್ರಿಯ.

**चाँई** - **वि०** ಕಪಟಿ; ಮೋಸಗಾರ; ಬೋಳು ತಲೆಯವನು.

**चाँक** - **पु०** ದವಸ ಧಾನ್ಯದ ರಾಶಿಗಳಿಗೆ ಮುದ್ರೆಹಾಕುವ ಕೋಲು.

**चाँकना** - **स०** ಧಾನ್ಯದ ರಾಶಿಗೆ ಮುದ್ರೆ ಹಾಕು.

**चाँगला** - **वि०** ಚತುರ; ಆರೋಗ್ಯವಂತ.

**चाँटा** - **पु०** ದೊಡ್ಡ ಇರುವೆ; ಅಂಗೈಯ ಹೊಡೆತ.

**चाँड़** - **वि०** ಪ್ರಬಲವಾದ; ಸೊಕ್ಕಿದ. **स्त्री०** ಭಾರವನ್ನು ಹೊತ್ತುಕೊಂಡಿರುವ ಕಂಭ; ಆಧಾರ; ಒತ್ತಾಯ.

**चांडाल** - **पु०** ಅತ್ಯಂತ ನೀಚವಾದ ಜಾತಿ.

**चांडाली** - **स्त्री०** ಚಾಂಡಾಲ ಜಾತಿಯ ಹೆಂಗಸು.

**चाँद** - **पु०** ಚಂದ್ರ.

**चाँदना** - **पु०** } ಚಂದ್ರಪ್ರಕಾಶ;
**चाँदनी** - **स्त्री०** } ಬೆಳದಿಂಗಳು.

**चाँदमारी** - **स्त्री०** ಗೋಡೆಯಮೇಲೆ ಅಥವಾ ವಸ್ತ್ರದಮೇಲಿನ ಚುಕ್ಕೆಗಳನ್ನು ಗುರಿಯಿಟ್ಟು ಗುಂಡು ಹಾರಿಸುವ ವಿದ್ಯೆಯನ್ನು ಕಲಿಯುವಿಕೆ; ಸಿನಿಮಾ ಷೂಟಿಂಗ್.

**चांदी** - **स्त्री०** ಬೆಳ್ಳಿ; ರಜತ.

**चाँप** - **स्त्री०** ಬಿಲ್ಲು; ಬಗ್ಗುವಿಕೆ; ತುಪಾಕಿಯ ಚಾಪು.

**चाँपना** - **स०** ಒತ್ತು.

**चाँपी** - **स्त्री०** ಎಣ್ಣೆ ತಿಕ್ಕಿ ಮೈ ಕೈ ಉಜ್ಜುವುದು; ಮಸಾಜು ಮಾಡುವುದು.

**चायँचायँ** } **स्त्री०** ವ್ಯರ್ಥಪ್ರಲಾಪ.
**चावँचावँ** }

**चा** - **स्त्री०** **दे०** **चाय.**

**चाक** - **पु०** ಗಾಡಿ ಅಥವಾ ರಥದ ಚಕ್ರ; ರಾಟೆ; ಬಿರುಕು; ಸೀಳು.

**चाक़** - **वि०** ಗಟ್ಟಿಮುಟ್ಟಾದ.

**चाकचौबंद** - **वि०** ದೃಢವಾದ; ಗಟ್ಟಿಯಾದ.

**चाकना** - **स०** ಎಲ್ಲೆಯಗೆರೆ ಎಳೆ; ಗೊತ್ತುಹಚ್ಚುವದಕ್ಕಾಗಿ ಯಾವುದಾದರೂ ವಸ್ತುವಿನ ಮೇಲೆ ಗುರುತುಹಾಕು.

**चाकर** - **पु०** ಸೇವಕ; ಭೃತ್ಯ.

**चकरी** - **स्त्री०** ಊಳಿಗ; ನೌಕರಿ; ಚಾಕರಿ.

**चाकी** - **स्त्री०** ಬೀಸುವಕಲ್ಲು; ಮಿಂಚು.

**चाक़ू** - **पु०** ಚಾಕು; ಚೂರಿ.

**चाखना** - ಸ೦ ದೇ೦ **चखना.**

**चाचा** - ಪು೦ ಚಿಕ್ಕಪ್ಪ ಅಥವಾ ದೊಡ್ಡಪ್ಪ ; ಕಕ್ಕ.

**चाची** - ಸ್ತ್ರೀ೦ ಚಿಕ್ಕಪ್ಪ ಅಥವಾ ದೊಡ್ಡಪ್ಪನ ಹೆಂಡತಿ ; ಚಿಕ್ಕಮ್ಮ ; ದೊಡ್ಡಮ್ಮ.

**चाट** - ಸ್ತ್ರೀ೦ ಇಷ್ಟ ; ಹಂಬಲ ; ಗೀಳು ; ಚಟ.

**चाटना** - ಸ೦ ನೆಕ್ಕು ; ಚಪ್ಪರಿಸು.

**चाटु** - ಪು೦ ಸವಿಮಾತು ; ಮುಖಸ್ತುತಿ.

**चाटुकार** - ಪು೦ ಮುಖಸ್ತುತಿಮಾಡುವವನು.

**चाटुकारी** - ಸ್ತ್ರೀ೦ ಮುಖಸ್ತುತಿ.

**चाणाक्ष** - ಪು೦ ಕಪಟಿ, ಧೂರ್ತ.

**चातक** - ಪು೦ ಚಾತಕಪಕ್ಷಿ.

**चातुर्य** - ಪು೦ ಚತುರತೆ ; ದಕ್ಷತೆ.

**चादर** - ಸ್ತ್ರೀ೦ ಹೊದಿಕೆ ; ಹಚ್ಚಡ ; ದುಪ್ಪಟಿ.

**चादरा** - ಪು೦ ದೊಡ್ಡದುಪ್ಪಟಿ.

**चाप** - ಪು೦ ಬಿಲ್ಲು ; ಧನುಸ್ಸು ; ಒತ್ತಡ ; ದಬಾವು ; ನಡಿಗೆ (ಹೆಜ್ಜೆ) ಯಸಪ್ಪಳ.

**चापट** - ಸ್ತ್ರೀ೦ ತೌಡು ; ಹೊಟ್ಟು ; ಭೂಸಿ.

**चापड़** - ವಿ೦ ಕಾಲಿನ ಕೆಳಗೆ. ಸಿಕ್ಕಿ ಬಜ್ಜಿಯಾಗಿಹೋದ ; ನೆಲಸಮವಾಗಿ ಹೋದ ; ಪದದಲಿತ.

**चापना** - ಸ೦ ಅದುಮು ; ಒತ್ತು ; ಅಪ್ಪಿಕೊಳ್ಳು.

**चापल** - ಪು೦ ಚಾಂಚಲ್ಯ ; ಚಪಲತೆ. ವಿ೦ ಚಂಚಲವಾದ ; ಅಸ್ಥಿರ.

**चापलूस** - ವಿ೦ ಮುಖಸ್ತುತಿಮಾಡುವವ.

**चापलूसी** - ಸ್ತ್ರೀ೦ ಮುಖಸ್ತುತಿ.

**चापी** - ಪು೦ ಶಿವ, ಧನುಸ್ಸನ್ನು ಧರಿಸಿದವನು.

**चाबना** - ಸ೦ ಅಗಿ; ಮೆಲ್ಲು; ತಿನ್ನು.

**चाबी** - ಸ್ತ್ರೀ೦ ಬೀಗದ ಕೈ.

**चाबुक** - ಪು೦ ಕೊರಡು ; ಬಾರುಕೋಲು ; ಚಾವುಟಿ ;—**दस्त** - ಚತುರ.

**चाबुक सवार** - ಪು೦ ಕುದುರೆಯನ್ನು ಪಳಗಿಸುವ.

**चाबुक सवारी** - ಸ್ತ್ರೀ೦ ಕುದುರೆಯನ್ನು ಪಳಗಿಸುವ ಕೆಲಸ.

**चाभना** - ಸ೦ ತಿನ್ನು ; ಭಕ್ಷಣ ಮಾಡು.

**चाभी** - ಸ್ತ್ರೀ೦ ದೇ೦ **चाबी.**

**चाम** - ಪು೦ ಚರ್ಮ ; ತೊಗಲು ; —**के दाम चलाना** - ಅನ್ಯಾಯ ಮಾಡುವುದು.

**चामर** - ಪು೦ ಚಾಮರ.

**चामरिक** - ಪು೦ ಚಾಮರ ಬೀಸುವವನು.

**चाय** - ಸ್ತ್ರೀ೦ ಚಹಾ ಅಥವಾ ಟೀ ಸೊಪ್ಪು ಮತ್ತು ಇದರ ಕಷಾಯ.

**चार** - ವಿ೦ ನಾಲ್ಕು;—**आँखें होना** - ಪ್ರೇಯಸಿ ಮತ್ತು ಪ್ರಿಯರ ನೋಟಗಳು ಸಂಧಿಸುವಿಕೆ, ದೃಷ್ಟಾದೃಷ್ಟಿ

ಆಗು ;—चाँद होना - ಸೌಂದರ್ಯ ವೃದ್ಧಿಯಾಗು ;—दिन की चाँदनी - ಕ್ಷಣಿಕ ಅಥವಾ ಸ್ವಲ್ಪವೇ ಕಾಲದ ಸುಖ ;—दिन की चाँदनी, फिर अंधेरी रात - (ಗಾದೆ) ಸುಖ ಕೆಲಕಾಲ, ಕಷ್ಟ ಕೆಲ ಕಾಲ.

**चारख़ाना** - ಪುಂ ಬಣ್ಣ ಬಣ್ಣದ ಚೌಕಳಿ ವಸ್ತ್ರ.

**चारजामा** - ಪುಂ ಕುದುರೆಯ ಜೀನು.

**चारण** - ಪುಂ ವಂದಿಮಾಗಧರು.

**चारदीवारी** - ಸ್ತ್ರೀಂ ಊರ ಸುತ್ತಿನ ಗೋಡೆ ; ಪ್ರಾಕಾರ.

**चारनाचार** - ಕ್ರಿಂ ಬಲವಂತವಾಗಿ.

**चारपाई** - ಸ್ತ್ರೀಂ ಮಂಚ.

**चारबाज** - ಪುಂ ಚದುರವಾದ ತೋಟ; ಚದುರಮೂಲೆ.

**चारबालिश** - ಪುಂ ದುಂಡಾದದಿಂಬು.

**चार-मजबूरन** - ಕ್ರಿಂ ವಿವಶನಾಗಿ ; ನಿರುಪಾಯನಾಗಿ.

**चारा** - ಪುಂ ಮೇವು ; ತಿನಸು ; ಉಪಾಯ ; ಯತ್ನ.

**चाराजोई** - ಸ್ತ್ರೀಂ ಫಿರ್ಯಾದಿ; ದಾವೆ.

**चारित्र** - ಪುಂ ವಂಶಪಾರಂಪರ್ಯವಾಗಿ ಬಂದಿರುವ ಆಚಾರ ; ನಡೆನುಡಿ ; ಸ್ವಭಾವ.

**चारी** - ವಿಂ ನಡೆಯುವ ; ಸಂಚರಿಸುವ.

**चारु** - ವಿಂ ಸುಂದರವಾದ; ಮನೋಹರವಾದ ;—फल - ದ್ರಾಕ್ಷೆ.

**चाल** - ಸ್ತ್ರೀಂ ನಡೆ ; ಗತಿ ; ಗಮನ ; ಆಚರಣೆ ; ಆಕಾರಪ್ರಕಾರ ; ಉಪಾಯ ; ಕಪಟ ; ಸಪ್ಪಳ ;—चलन - ಪುಂ ನಡೆನುಡಿ ; ಆಚರಣೆ ;—चलना - ಸಂ ಜಾಲಹರಡು, ಮೋಸಮಾಡು.

**चालक** - ಪುಂ ನಡೆಯಿಸುವವ; ಸಂಚಾಲಕ ; ಧೂರ್ತ.

**चालढाल** - ಪುಂ ಮೈಕಟ್ಟು ; ಕಾರ್ಯದರೀತಿ ; ಉಪಾಯ.

**चालना** - ಸಂ ಸಂಚಾಲನಮಾಡು.

**चालबाज़** - ಪುಂ ಧೂರ್ತ, ಮೋಸಗಾರ.

**चालाक** - ವಿಂ ವ್ಯವಹಾರ ಕುಶಲ ; ಚತುರ ; ಧೂರ್ತ.

**चालाकी** - ಸ್ತ್ರೀಂ ಚಾತುರ್ಯ ; ಮೋಸ ; ತಂತ್ರ ; ಯುಕ್ತಿ.

**चालान** - ಪುಂ ಕೊಂಡ ಸರಕುಗಳ ಪಟ್ಟಿ ; ಥೇಟಪಟ್ಟಿ ; ಅಪರಾಧಿಗಳನ್ನು ವಿಚಾರಣೆಗಾಗಿ ನ್ಯಾಯಸ್ಥಾನಕ್ಕೆ ಕಳುಹಿಸುವಿಕೆ.

**चालिया** - ವಿಂ ದೇಂ चालबाज़.

**चाली** - ವಿಂ ಧೂರ್ತ. ಸ್ತ್ರೀಂ ಹುರುಕು ವಸ್ತ್ರ; ಚಿಂದಿ.

**चालीसा** - ಪುಂ ನಲವತ್ತು ವರ್ಷಗಳ ಕಾಲ ; ಸುಲೋಚನ ; ಚಾಳೀಸ.

**चाव** - ಪುಂ ಪ್ರಬಲವಾದ ಇಚ್ಛೆ ; ಲಾಲಸೆ ; ಅನುರಾಗ ; ಪ್ರೇಮ ; ಅಭಿರುಚಿ ; ಉತ್ಸಾಹ.

**चावर** } **चावल** } **पुं०** ಅಕ್ಕಿ ; ಅನ್ನ.

**चाशनी - स्त्री०** ಜಿಲೇಬಿ ಮೊದಲಾದ ಮಿಠಾಯಿಯನ್ನು ಅದ್ದುವ ಸಕ್ಕರೆ ಅಥವಾ ಬೆಲ್ಲದ ಪಾಕ; ಕ್ಷೀರ. **(चासनी)**

**चास - पुं०** ಉಳುವಿನ ಸಾಲು.

**चासना - स०** ಉಳು ; ನೇಗಿಲು ಹಿಡಿ.

**चाह - स्त्री०** ಇಚ್ಛೆ ; ಅಪೇಕ್ಷೆ ; ಪ್ರೇಮ ; ಆವಶ್ಯಕತೆ.

**चाहक - पुं०** ಅಪೇಕ್ಷಿಸುವವನು.

**चाहत - स्त्री० दे० चाह.**

**चाहना - स०** ಅಪೇಕ್ಷಿಸು ; ಇಷ್ಟ ಪಡು ; ಪ್ರೀತಿಸು.

**चाहिए** } **चाहिये** } **अव्य०** ಬೇಕು.

**चाही - वि०** ಅಪೇಕ್ಷಿಸಲ್ಪಟ್ಟ.

**चाहे - अव्य०** ಮನಬಂದಂತೆ ; ಇಲ್ಲವೆ ; ಬೇಕಾದರೆ.

**चाहे-ग़बग़ब - पुं०** ಕಪಾಳದಮೇಲಿನ ಹಳ್ಳ.

**चाहे-ज़क़न - पुं०** ಕೆನ್ನೆ ಅಥವಾ ಗಡ್ಡದ ಮೇಲಿನ ಹಳ್ಳ.

**चाहे-ज़नख़दा - पुं०** ಗಲ್ಲದಮೇಲಿನ ಹಳ್ಳ.

**चिउँटा - पुं०** ದೊಡ್ಡ ಇರುವೆ.

**चिउँटी - स्त्री०** ಸಣ್ಣ ಇರುವೆ.

**चिंगारी - स्त्री० दे० चिनगारी.**

**चिंगुराना - अ०** ಜೋವು ಹಿಡಿಯುವುದು.

**चिंघाड़ - स्त्री०** ಚೀತ್ಕಾರ; ಘೀಂಕಾರ ; ಆನೆಯಕೂಗು.

**चिंतन - पुं०** ಧ್ಯಾನ ; ಮನನ.

**चिंतना - स०** ಮನನಮಾಡು. **स्त्री०** ಧ್ಯಾನ ; ಸ್ಮರಣೆ ; ಯೋಚನೆ.

**चिंता - स्त्री०** ಯೋಚನೆ.

**चिंतित - वि०** ಚಿಂತೆಯಿಂದೊಡಗೂಡಿದ ; ವ್ಯಥೆಯುಳ್ಳ.

**चिंदी - स्त्री०** ಚೂರು ; ತುಂಡು.

**चिउड़ा** } **चिउरा** } **पुं०** ಅವಲಕ್ಕಿ.

**चिक - स्त्री०** ತಡಿಕೆ ; ತಟ್ಟಿ ; ಕಸಾಯಿ.

**चिकट** } **वि०** ಕೊಳೆಯಾದ; ಅಂಟುಳ್ಳ; **चिकटा** } **पुं०** ತಂಗಿಯ ಮಕ್ಕಳ ವಿವಾಹಕಾಲದಲ್ಲಿ ಅಣ್ಣನು ಓದಿಸುವ ಉಡುಗೊರೆ.

**चिकटना - अ०** ಜಿಗಟಾಗಿರು; ಅಂಟು ಅಂಟಾಗಿರು.

**चिकन - पुं०** ಕಸೂತಿ ಕೆಲಸಮಾಡಿದ ವಸ್ತ್ರ.

**चिकना - वि०** ನುಣುಪಾದ ; ಜಿಡ್ಡಾದ ; ಮೂರ್ಖ. **चिकनी चुपड़ी बातें -** ಮರುಳುಮಾಡುವ ಮಧುರ ವಚನಗಳು ; ಕಪಟ ಸ್ನೇಹದ ಮಾತುಗಳು.

**चिकनाई - स्त्री०** ನುಣುಪು ; ಜಿಡ್ಡು.

**चिकनाना - स०** ನಯಮಾಡು ; ಮೆರಗು ಹಾಕು.

**चिकनिया** - वि० ಸುಂದರವಾದ ವೇಷ ವಿನ್ಯಾಸವುಳ್ಳ; ಶೃಂಗಾರಪ್ರಿಯ; ವಿಲಾಸಿ.

**चिकरना** - अ० ಚೀರು; ಚೀತ್ಕಾರ ಮಾಡು.

**चिकवा** - पु० ಕಸಾಯಿಯವನು; ಕಟುಕ.

**चिकित्सा** - स्त्री० ಚಿಕಿತ್ಸೆ; ಇಲಾಜು; ವಾಸಿಮಾಡುವುದು.

**चिकुर** - पु० ತಲೆಯ ಕೂದಲು; ಹಾವಿನ ಜಾತಿಯ ಪ್ರಾಣಿಗಳು.

**चिकोटी** - स्त्री० ಚಿಟಿಕೆ; ಚಿವುಟು ವಿಕೆ.

**चिक्कट** - पु० ಗಸಿ; ಬಗ್ಗಡ; ಕೊಳಕು. वि० ಕೊಳಕಾದ.

**चिक्कन** - वि० दे० चिकना.

**चिक्करना** - अ० दे० चिकरना.

**चिखर** - पु० ಕಡಲೆಯ ಹೊಟ್ಟು.

**चिखुरना** - स० ಕದತೆರೆಯು.

**चिचड़ा** - पु० ಉತ್ತರೇಣಿ.

**चिचिंड़ा** - पु० ಹೀರೇಕಾಯಿ.

**चिचियाना** - अ० दे० चिल्लाना.

**चिट** - पु० ಕಾಗದದ ಚೂರು; ಚೀಟಿ.

**चिटकना** - अ० ಚೆನ್ನಾಗಿ ಒಣಗುವುದರಿಂದ ಅಲ್ಲಲ್ಲಿ ಬಿರಿಯು; ಸೀಳಿಹೋಗು; "ಚಟಚಟ" ಎಂದು ಉರಿ; ಸಿಡಿಮಿಡಿಗುಟ್ಟು.

**चिटनवीस** - पु० ಪತ್ರಲೇಖಕ; ಕೆಲಸ ಮಾಡುವವ; ಗುಮಾಸ್ತ.

**चिट्ठा** - पु० ಜಮಾಖರ್ಚಿನ ಲೆಕ್ಕ; ಖಾತೆಕಿರ್ದಿ.

**चिट्ठी** - स्त्री० ಕಾಗದ; ಪತ್ರ; ಓಲೆ; ಚೀಟಿ.

**चिट्ठी-पत्री** - स्त्री० ಕಾಗದ ಪತ್ರಗಳು.

**चिट्ठी-रसाँ** - पु० ಅಂಚೆ ಸಿಪಾಯಿ; ಅಂಚೆಯವ; ಕಾಗದಗಳನ್ನು ಬಟವಾಡೆಮಾಡುವವ.

**चिचिड़ा** - वि० ಸಿಡಿಮಿಡಿ ಸ್ವಭಾವದ; ಸಿಡುಕು ಮೋರೆಯ.

**चिड़चिड़ाना** - अ० 'ಚಿಟ್ ಚಿಟ್' ಎಂದು ಶಬ್ದವಾಗು; ಒಣಗಿ ಬಿರಿಯು.

**चिड़वा** - पु० ಅವಲಕ್ಕಿ.

**चिड़िया** - स्त्री० ಪಕ್ಷಿ; ಹಕ್ಕಿ.

**चिड़ियाखाना** - पु० ಪಶುಪಕ್ಷಿಗಳ ಸಂಗ್ರಹಾಲಯ.

**चिड़िहार**, **चिड़ीमार** - पु० ಪಕ್ಷಿಗಳ ಬೇಟೆಗಾರ; ವ್ಯಾಧ.

**चिढ़** - स्त्री० ಸಿಟ್ಟು; ತಿರಸ್ಕಾರ; ತಾತ್ಸಾರ.

**चिढ़ना** - अ० ಸಿಟ್ಟುಗೊಳ್ಳು; ರೇಗು; ಕೋಪಿಸು.

**चिड़वाना**, **चिढ़ाना** - स० ಸಿಟ್ಟಿಗೆಬ್ಬಿಸು; ರೇಗಿಸು.

**चित** - वि० ಅಂಗಾತಮಲಗಿದ. पु० ಚಿತ್ತ; ಮನಸ್ಸು.

**चितकबरा** - वि० ಅನೇಕ ಬಣ್ಣದ; ಚೀಟಿ ಬಣ್ಣದ.

**चितचोर** - वि० ಮನೋಹರ; ಪ್ರಿಯ.

**चितभंग** - पु० ವ್ಯಾಕುಲ; ದುಃಖ.

**चितवन** - स्त्री० ದೃಷ್ಟಿ.

**चितला** - वि० ನಾನಾ ಬಣ್ಣಗಳುಳ್ಳ; ಚೀಟಿಚೀಟಿಯಾದ.

**चितवना** - स० ನೋಡು.

**चितवाना** - पु० ತೋರಿಸು.

**चिता** - स्त्री० ಹೆಣವನ್ನು ಸುಡುವುದಕ್ಕಾಗಿ ಏರ್ಪಡಿಸುವ ಕಟ್ಟಿಗೆಯ ರಾಶಿ; ಚಿತೆ.

**चिताना** - स० ಎಚ್ಚರಿಕೆ ಕೊಡು.

**चितावनी** - स्त्री० ಎಚ್ಚರಿಕೆ; ಸಾವಧಾನ.

**चितेरा** - पु० ಚಿತ್ರಗಾರ.

**चितेरिन**, **चितेरी** - स्त्री० ಚಿತ್ರಗಾರ್ತಿ; ಚಿತ್ರಗಾರನ ಸ್ತ್ರೀ.

**चित्ती** - स्त्री० ಕಲೆ; ಮಚ್ಚೆ; ಚುಕ್ಕಿ; ಚಿತ್ತು.

**चित्रपट** - पु० ಚಲನಚಿತ್ರ.

**चिथड़ा** - पु० ಹಳೆಯ ಹರಕು ವಸ್ತ್ರ; ಚಿಂದಿ.

**चिथाड़ना** - स० ಹರಿ; ಸಿಗಿ; ಅವಮಾನಪಡಿಸು.

**चिनक** - स्त्री० ಉರಿಯುವಂಥ ನೋವು.

**चिनगारी** - स्त्री० ಕಿಡಿ; ಅಗ್ನಿಕಣ.

**चिनगी** - स्त्री० ಕಿಡಿ; ಚಟುವಟಿಕೆಯುಳ್ಳ ಮತ್ತು ಚತುರನಾದ ಹುಡುಗ.

**चिनाना** - स० ಆರಿಸು.

**चिनिया** - वि० ಬಿಳಿಯ; ಚೀನಾ ದೇಶದ.

**चिन्हना** - स० ಗುರುತಿಸು.

**चिनियाबदाम** - पु० ನೆಲಗಡಲೆ.

**चिन्हार** - वि० ಗುರುತುಳ್ಳ; ಪರಿಚಿತ.

**चिन्हारी** - स्त्री० ಗುರುತು; ಪರಿಚಯ.

**चिपकना** - स० ಅಂಟಿಕೊಳ್ಳು; ಹತ್ತಿಕೊಳ್ಳು.

**चिपकाना** - स० ಅಂಟಿಸು; ಹಚ್ಚು; ಜೋಡಿಸು.

**चिपचिप** - पु० ಜಿಗಟು; ಮುಟ್ಟಿದರೆ ಪಿಚಿಪಿಚಿ ಎಂದಿರುವಿಕೆ.

**चिपचिपा** - वि० ಅಂಟು ಅಂಟಾದ; ಜಿಗಟಾದ.

**चिपचिपाना** - अ० ಅಂಟು ಅಂಟಾಗಿರು; ಜಿಗಟಾಗಿರು.

**चिपटना** - अ० दे० **चिपकना**.

**चिपटा** - वि० ಚಪ್ಪಟೆಯಾದ.

**चिपड़ी**, **चिपरी** - स्त्री० ಬೆರಣಿ.

**चिबिल्ला** - वि० ಚಂಚಲನಾದ; ತಂಟಲುಮಾರಿ.

**चिबुक** - पु० ಗಡ್ಡ; ಗಲ್ಲ.

**चिमटना** - अ० ಅಂಟಿಕೊಳ್ಳು; ಅಪ್ಪಿಕೊಳ್ಳು; ಹಿಂಬಾಲಿಸು; ಬೆನ್ನುಹತ್ತು.

**चिमटा** - पु० ಇಕ್ಕಳ; ಚಿಮುಟ.

**चिमटी** - स्त्री० ಸಣ್ಣ ಇಕ್ಕಳ.

**चिमनी** - स्त्री० ಹೊಗೆಯುಗೂಡು; ಚಿಮಣಿ.

**चिरंतन** - वि० ಬಹಳಕಾಲದ; ಪುರಾತನ.

**चिरकीन** - वि० ಕೊಳೆ; ಹೊಲಸು.

**चिरकुट** - पु० ಚಿಂದಿಬಟ್ಟೆ.

**चिरना** - अ० ಹರಿದುಹೋಗುವುದು.

**चिरबत्ती** - वि० ಚಿಂದಿಚಿಂದಿಯಾದ; ಚೂರುಚೂರಾದ.

**चिरवाना** - स० ಹರಿಯಿಸುವುದು; ಸೀಳಿಸುವುದು.

**चिराइन** - स्त्री० ಕೂದಲು ಚರ್ಮ ಕೊಬ್ಬು ಇತ್ಯಾದಿಗಳ ಸುಡುವಿಕೆಯಿಂದ ಉಂಟಾಗುವ ದುರ್ಗಂಧ; ಕಮರು ವಾಸನೆ.

**चिराई** - स्त्री० ಸೀಳುವಿಕೆ; ಸೀಳುವುದಕ್ಕೆ ಕೊಡುವ ಮಜೂರಿ.

**चिराग़** - पु० ದೀಪ; ಸೊಡರು; **—दान** - ದೀಪದ ಪೀಠ; **—बढ़ाना, गुल करना** - ದೀಪ ವಾರಿಸು.

**चिराग़ी** - स्त्री० ದೀವಟಿಗೆಯುವನಿಗೆ ಕೊಡುವ ಮಜೂರಿ.

**चिरातन** - वि० ಪುರಾತನ; ಜೀರ್ಣ.

**चिराना** - अ० ಸೀಳಿಸು.

**चिरायंध** - स्त्री०दे० **चिराइन.**

**चिरायता** - पु० ನೆಲಬೇವು.

**चिरी** - स्त्री० दे० **चिड़िया.**

**चिरौंजी** - स्त्री० ಸಾರೆಪಪ್ಪು.

**चिरौरी** - स्त्री० ಬಹಳ ವಿನಯದಿಂದ ಪ್ರಾರ್ಥನೆ ಮಾಡುವಿಕೆ.

**चिलक** - स्त्री० ಹೊಳಪು; ಕಾಂತಿ.

**चिलकना** - अ० ಮಿಂಚು.

**चिलगोजा** - पु० ಝಳಝಳಿಸುವುದು; ಒಂದು ಬಗೆಯ ಬಾದಾಮಿ ಜಾತಿಗೆ ಸೇರಿದ ಹಣ್ಣು ಅಥವಾ ಅದರ ವಾಟೆಯೊಳಗಿನ ತಿರುಳು.

**चिलचिलाना** - अ० ಸಹಿಸಲಾರದಂತಾಗು.

**चिलबिला, चिलबिल्ला** - वि० ಚಂಚಲ; ಚುರುಕಾದ; ಚಪಲವುಳ್ಳ; **—करना** - ಒಂದುಕಡೆ ನಿಲ್ಲದೆ ಅತ್ತಿತ್ತ ಓಡಾಡು.

**चिलम** - स्त्री० ತಂಬಾಕು ಗಾಂಜಾ ಇತ್ಯಾದಿಗಳನ್ನು ಸೇದಲು ಉಪಯೋಗಿಸುವ ಕೊಳವಿ; ಚುಂಗಾಣಿ; ಚಿಲಮು.

**चिलमची** - स्त्री० ಕೈ ಬಾಯಿ ತೊಳೆಯುವ ತಟ್ಟೆ.

**चिलमन** - पु० ಬಿದುರಿನ ದಬ್ಬೆಗಳಿಂದ ಮಾಡಿದ ಪರದೆ.

**चिल्लड़** - पु० ಕೂರೆ ಹೇನು.

**चिल्ल-पों** - स्त्री० ಗುಲ್ಲು; ಗದ್ದಲ; ಬೊಬ್ಬೆ.

**चिल्ला** - पु० ನಲವತ್ತು ದಿನಗಳ ಕಾಲ; ಹೆದೆ; **चिल्ले का जाड़ा** - ತೀರ ಅಸಹನೀಯವಾದ ಛಳಿ.

**चिल्लाना** - अ० ಚೀರು; ಬೊಬ್ಬೆ ಹಾಕು; ಅರಚು; ಕಿರಚು.

**चिल्लाहट** - स्त्री० ಬೊಬ್ಬೆ ; ಕೂಗು.

**चिहुँकना** - अ० दे० **चौंकना.**

**चिहुँटी** - स्त्री० ಚಿಟಿಕೆ.

**चीं चपड़** - स्त्री० ವಿರೋಧವಾಗಿ ಹೇಳುವುದು ; ಆಕ್ಷೇಪಣೆ.

**चींटा** - पु० ದೊಡ್ಡ ಇರುವೆ; ಗೊದ್ದ.

**चींटी** - स्त्री० ಇರುವೆ.

**चीक** - स्त्री० ನೋವು ಅಥವಾ ಕಷ್ಟವನ್ನು ಸೂಚಿಸುವ ಕೂಗು ; ಚೀತ್ಕಾರ. पु० ಕಸಾಯಿ ; ಕಟುಕ.

**चीकट** - स्त्री० ಕೊಳೆ; ಜಿಡ್ಡು ; ಮೇಣ. **वि०** ಕೊಳೆಯಾದ.

**चीख़** - स्त्री० ಕೂಗಾಟ ; ಬೊಬ್ಬೆ.

**चीख़ना** - अ० ಅರಚು ; ಕಿರಚು ; ಕೂಗಾಡು.

**चीख़ुर** - पु० ಅಳಿಲು.

**चीज़** - स्त्री० ಪದಾರ್ಥ ; ವಸ್ತು.

**चीठी** - पु० ಪತ್ರ ; ಕಾಗದ

**चीतकार** - पु० ಚೀತ್ಕಾರ; ಚಿತ್ರಗಾರ.

**चीतना** - स० ಯೋಚಿಸು ; ನೆನಸು ; ಸ್ಮರಿಸು ; ಚಿತ್ರಿಸು.

**चीता** - पु० ಚಿರತೆ. **वि०** ಯೋಚಿಸಿದ.

**चीथड़ा** - पु० दे० **चिथड़ा.**

**चीथना** - स० ಹರಿ ; ಸೀಳು.

**चीदा** - वि० ಶ್ರೇಷ್ಠ ; ಆರಿಸಿದ.

**चीनना** - स० ಗುರುತಿಸು.

**चीनाबादाम** - स्त्री० दे० **चिनिया-बदाम.**

**चीनी** - स्त्री० ಸಕ್ಕರೆ ; ಚೀನಿಮಣ್ಣು ; **—मिट्टी** - स्त्री० ಪಿಂಗಾಣಿ ಸಾಮಾನುಮಾಡುವ ಮಣ್ಣು.

**चीन्हना** - स० ಗುರುತಿಸು.

**चीपड़** - पु० ಕಣ್ಣಿನ ಗೀಜು.

**चीमड़** - वि० ಜಗ್ಗಿ ಮುರಿದು ಬಗ್ಗಿಸಿದರೂ ಹರಿಯದ ಅಥವಾ ಮುರಿಯದ; ಮೆದುವಾದ; ಮೆತ್ತನೆಯ.

**चीर** - पु० ಬಟ್ಟೆ ; ವಸ್ತ್ರ. **स्त्री०** ಸೀಳುವಿಕೆ.

**चीरघर** - पु० ಮರದ ದಿಮ್ಮಿಗಳನ್ನು ಕೊಯ್ಯುವ ಸ್ಥಳ.

**चीरना** - स० ಕೊಯ್ಯು ; ಸೀಳು ; ಸಿಗಿ.

**चीरफाड़** - स्त्री० ಹರಿದು ಹಾಕುವ ಕೆಲಸ.

**चीरा** - पु० ತಲೆಗೆ ಸುತ್ತಿಕೊಳ್ಳುವ ವಸ್ತ್ರ.

**चीरी** - स्त्री० दे० **चिड़िया.**

**चील** - स्त्री० ಹದ್ದು ; ಗರುಡ.

**चीलड़**, **चीलर** - पु० ಕೊಳೆಬಟ್ಟೆಗಳಲ್ಲಿ ಬೀಳುವ ಕೂರೆಹೇನು.

**चील्ह** - स्त्री० दे० **चील.**

**चीवर** - पु० ಸನ್ಯಾಸಿ ಅಥವಾ ಭಿಕ್ಷುಕರ ಹರಕುವಸ್ತ್ರ; ಬೌದ್ಧ ಭಿಕ್ಷುಗಳು ಧರಿಸುವ ವಸ್ತ್ರಗಳ ಸಮೂಹ.

**चुंगल** - पु० ಪಶುಪಕ್ಷಿಗಳ ಪಂಜ ; ಹಿಡಿಕೆ ; ಮುಷ್ಟಿ.

**चुंगी** - ಸ್ತ್ರೀ೦ ಹಿಡಿ ಅಥವಾ ಚಿಟಿಕೆಯಲ್ಲಿ ತುಂಬುವಷ್ಟು ವಸ್ತು; ಸುಂಕ.

**चुंघाना** - ಸಂ ಗುಟುಕು ಗುಟುಕಾಗಿ ಕುಡಿಸು.

**चुंदी** - ಸ್ತ್ರೀ೦ ಜುಟ್ಟು.

**चुंधलाना** }
**चुंधियाना** } ಅಂ ಕಣ್ಣು ಕುಕ್ಕು.

**चुंबक** - ಪುಂ ಸೂಜಿಗಲ್ಲು; ಲೋಹ ಚುಂಬಕ.

**चुंबन** - ಪುಂ ಮುತ್ತು; ಚುಂಬನ.

**चुंबना** - ಸಂ ಮುತ್ತಿಡು.

**चुंबी** - ವಿಂ ಮುತ್ತುಕೊಡುವವನು.

**चुआना** - ಸಂ ತೊಟ್ಟಿಕ್ಕಿಸು; ಹನಿಸು.

**चुकंदर** - ಪುಂ ಕೆಂಪುಮೂಲಂಗಿಯಂತಿರುವ ಒಂದು ತರಕಾರಿ.

**चुकता** }
**चुकती** } ವಿಂ ನಿಶ್ಶೇಷ; ಬಗೆಹರಿಸಿದ; ಮುಗಿಸೋಣ.

**चुकना** - ಅಂ ಮುಗಿ; ಸಮಾಪ್ತವಾಗು; ಬಾಕಿ ತೀರಿ ನಿರ್ಣಯವಾಗು; ದೋಷ ಅಥವಾ ತ್ರುಟಿಯುಂಟಾಗು; ವ್ಯರ್ಥವಾಗು.

**चुकाना** - ಸಂ ತೀರಿಸು; ಬೇಬಾಕಿಯಾಗಿಸು; ತೀರ್ಮಾನಮಾಡು; ಮುಗಿಸು.

**चुक्कड़** - ಪುಂ ನೀರು ಅಥವಾ ಸೇಂದಿ ಕುಡಿಯುವ ಮಣ್ಣಿನ ಕುಡಿಕೆ; ಮೊಗೆ.

**चुक्की** - ಸ್ತ್ರೀ೦ ಮೋಸ.

**चुखाना** - ಸಂ ಹಾಲು ಕರೆಯುವ ಮೊದಲು ಕರುವಿಗೆ ಮೊಲೆಯುಣ್ಣಿಸುವುದು.

**चुग़द** - ಪುಂ ಗೂಬೆ; ಗೂಗೆ; ಮೂರ್ಖ.

**चुगना** - ಸಂ ಕೊಕ್ಕಿನಿಂದ ಕಾಳುಕಡಿಯನ್ನು ಆರಿಸಿಕೊಂಡು ತಿನ್ನು; ಹೆಕ್ಕಿತಿನ್ನು.

**चुग़ल** - ಪುಂ ಪರೋಕ್ಷದಲ್ಲಿ ದೂಷಿಸುವವ; ಚಾಡಿಖೋರ.

**चुग़लखोर** - ಪುಂ ಚಾಡಿ ಹೇಳುವವ.

**चुगलखोरी** - ಸ್ತ್ರೀ೦ ಚಾಡಿಹೇಳುವಿಕೆ.

**चुगली** - ಸ್ತ್ರೀ೦ ಚಾಡಿ.

**चुगा** - ಪುಂ ಪಕ್ಷಿಗಳ ಮೇವು; ಎರೆ.

**चुगाई** - ಸ್ತ್ರೀ೦ ಪಕ್ಷಿಗಳು ಕೊಕ್ಕಿನಿಂದ ತಿನ್ನುವಿಕೆ.

**चुगाना** - ಸಂ ಪಕ್ಷಿಗಳಿಗೆ ಕಾಳು ತಿನ್ನಿಸು.

**चुचकारना** - ಸಂ ಮುದ್ದಾಡು; ಮುತ್ತಿಡುವ ಧ್ವನಿಯಿಂದ ಕರೆಯು.

**चुचुक** - ಪುಂ ಮೊಲೆಯ ತುದಿ; ಕುಚಾಗ್ರ.

**चुटका** - ಪುಂ ದೊಡ್ಡ ಚಿಟಿಕೆ; ಒಂದು ಚಿಟಿಕೆ ಹಿಟ್ಟು ಅಥವಾ ಧಾನ್ಯ.

**चुटकी** - ಸ್ತ್ರೀ೦ ಚಿಟಿಕೆ;—**बजाते** - ಕ್ಷಣಮಾತ್ರದಲ್ಲಿ;—**भरना** - ಇರಿಯುವಂತೆ ಮಾತನಾಡು;—**लेना** - ಹಾಸ್ಯಮಾಡು.

**नाथना** - ಸಂ ಮೂಗುದಾರ ಹಾಕು.

**नाद** - ಪುಂ ಶಬ್ದ ; ಧ್ವನಿ.

**नादना** - ಸಂ ಬಾರಿಸು. ಅಂ ಶಬ್ದವುಂಟಾಗು ; ಆನಂದಿಸು ; ಚಿಗುರು.

**नादान** - ವಿಂ ತಿಳುವಳಿಕೆಯಿಲ್ಲದ ; ಮೂರ್ಖ ; ಅಜ್ಞಾನಿ.

**नादानी** - ಸ್ತ್ರೀಂ ತಿಳಿಗೇಡಿತನ ; ಮೂರ್ಖತನ ; ಅಜ್ಞಾನ.

**नादार** - ವಿಂ ಬಡವ ; ನಿರ್ಧನ.

**नादारी** - ಸ್ತ್ರೀಂ ಬಡತನ; ದಾರಿದ್ರ್ಯ.

**नादिम** - ವಿಂ ಲಜ್ಜೆಗೊಂಡ; ನಾಚಿಕೆಪಟ್ಟ.

**नादिया** - ಪುಂ ನಂದಿ; ಕಪಿಲೆ ಬಸವ; ಗಂಗೆತ್ತು ; ಕೋಲೆಬಸವ.

**नादिर** - ವಿಂ ಅದ್ಭುತವಾದ; ವಿಚಿತ್ರವಾದ.

**नादिरशाही** - ಸ್ತ್ರೀಂ ಗೊತ್ತು ಗುರಿಯಿಲ್ಲದ ಆಡಳಿತ ; ಅತ್ಯಾಚಾರ.

**नादिरी** - ಸ್ತ್ರೀಂ ಒಂದು ಬಗೆಯ ಜುಬ್ಬ.

**नादिहंद** - ವಿಂ ಕೊಡದವನು ; ಜಿಪುಣ ; ಕೊಟ್ಟ ಹಣ ಹಿಂದಿರುಗಿಸದವನು.

**नादिहंदी** - ಸ್ತ್ರೀಂ ಕೊಡದಿರುವಿಕೆ.

**नादी** - ವಿಂ ಶಬ್ದ ಮಾಡುವ; ಬಾರಿಸುವ.

**नादीदा** - ವಿಂ ಕಾಣದ ; ಊಟದ ಸಾಮಗ್ರಿಗಳನ್ನು ಕಾಪಾಡಿಕೊಂಡಿರುವ.

**नादुरुस्त** - ವಿಂ ಅಶುದ್ಧ ; ತಪ್ಪು.

**नाधना** - ಸಂ ಕಟ್ಟು ; ನೊಗಕ್ಕೆ ಹೂಡು.

**नान** - ಸ್ತ್ರೀಂ ರೊಟ್ಟಿ ; ಚಪಾತಿ.

**नानकशाही** - ವಿಂ ಗುರು ನಾನಕನ ಶಿಷ್ಯರು.

**नानकार** - ಪುಂ ಹಣ ಅಥವಾ ಆಸ್ತಿಗಳನ್ನು ಸರಿಯಾದ ವ್ಯವಸ್ಥೆಗಾಗಿ ಬೇರೊಬ್ಬರ ವಶಕ್ಕೆ ಒಪ್ಪಿಸುವುದು.

**नानखताई** - ಸ್ತ್ರೀಂ ಬಿಲ್ಲೆಯಂತಿರುವ ಒಂದು ಮಿಠಾಯಿ; ಕತ್ತಾಯಿ.

**नानबाई** - ಪುಂ ರೊಟ್ಟಿಗಳನ್ನು ತಯಾರಿಸಿ ಮಾರುವವನು.

**नाना** - ಪುಂ ತಾಯಿಯ ತಂದೆ. ವಿಂ ವಿವಿಧ ; ಅನೇಕ ಪ್ರಕಾರದ.

**नानिहाल** - ಪುಂ ಮಾತಾಮಹರ ಮನೆ; ತಾಯಿಯ ತಂದೆಯ ಮನೆ.

**नानी** - ಸ್ತ್ರೀಂ ತಾಯಿಯ ತಾಯಿ.

**नानुकर** - ಪುಂ ತಿರಸ್ಕಾರ ; ಒಲ್ಲೆ ; ಊಹೂ ; ನಿಷೇಧಾರ್ಥ.

**नान्हा** - ವಿಂ ಚಿಕ್ಕ ; ಸಣ್ಣ.

**नाप** - ಸ್ತ್ರೀಂ ಅಳತೆ; ಪರಿಮಾಣ ; ಅಳೆಯುವ ಕೋಲು.

**नापजोख** / **नापतौल** - ಸ್ತ್ರೀಂ ಅಳತೆ ಮತ್ತು ತೂಕಮಾಡುವ ಕೆಲಸ.

**नापना** - ಸಂ ಅಳೆ ; ಅಳತೆಮಾಡು ; ತೂಕಮಾಡು.

**नापसंद** - ವಿಂ ಇಷ್ಟವಿಲ್ಲದ; ಅಪ್ರಿಯ ; ಮನಸ್ಸಿಗೆ ಒಪ್ಪದ.

**नापसंदगी** - ಸ್ತ್ರೀ० ಮನಸ್ಸಿಗೆ ಒಪ್ಪದಿರುವಿಕೆ; ಅಪ್ರಿಯತೆ.

**नापाक** - ವಿ० ಅಪವಿತ್ರ; ಅಶುದ್ಧ.

**नापाकी** - ಸ್ತ್ರೀ० ಅಪವಿತ್ರತೆ; ಅಶುದ್ಧತೆ.

**नापायदार** - ವಿ० ಆಧಾರ ರಹಿತ; ಕ್ಷಣಭಂಗುರ; ಬಾಳಿಕೆಯಿಲ್ಲದ.

**नापित** - ಪು० ಕ್ಷೌರಿಕ; ನಾಯಿಂದ.

**नाफ़** - ಸ್ತ್ರೀ० ನಾಭಿ; ಹೊಕ್ಕಳು.

**नाफ़रमाँ** - ಪು० ವಿರೋಧ ಮತ್ತು ತಿರಸ್ಕಾರಭಾವ ತೋರಿಸುವವನು.

**नाफ़हम** - ವಿ० ಅರಿಯದವ; ಅಜ್ಞಾನಿ.

**नाफ़हमी** - ಸ್ತ್ರೀ० ಅಜ್ಞಾನ; ಅವಿವೇಕ.

**नाफा** - ಪು० ಕಸ್ತೂರಿ ಮೃಗದ ಹೊಕ್ಕಳ ಚೀಲ.

**नाफ़िर** - ವಿ० ಅಸಹ್ಯಪಡುವವ.

**नाब** - ವಿ० ಶುದ್ಧವಾದ. ಪು० ಹಾವಿನ ವಿಷದಂತಹ; ದವಡೆಹಲ್ಲು.

**नाबदान** - ಪು० ಬಚ್ಚಲು; ಚರಂಡಿ.

**नाबालिग़** - ವಿ० ವಯಸ್ಸುಬಾರದ; ಪ್ರಾಯಕ್ಕೆ ಬಾರದ.

**नाबूद** - ವಿ० ನಾಶವಾದ; ಧ್ವಂಸವಾದ.

**नाभ** - ಸ್ತ್ರೀ० ವತ್ಸನಾಭಿ ಎಂಬ ವಿಷ; ಹೊಕ್ಕಳು.

**नाभक** - ಪು० ಅಳಲೆಕಾಯಿ.

**नाभि** - ಸ್ತ್ರೀ० ಹೊಕ್ಕಳು.

**नामंजूर** - ವಿ० ಅಸ್ವೀಕೃತ; ಒಪ್ಪಿಗೆಯಾಗದ.

**नामंजूरी** - ಸ್ತ್ರೀ० ಒಪ್ಪಿಗೆಯನ್ನು ಕೊಡದಿರುವುದು.

**नाम** - ಪು० ಹೆಸರು; ಕೀರ್ತಿ; —**लेना** - ಹೆಸರೆತ್ತು, ಪ್ರಸ್ತಾಪಿಸು, ಜಪಿಸು.

**नामक** - ವಿ० ಹೆಸರುಳ್ಳ; ಹೆಸರಿನ.

**नामज़द** - ವಿ० ಯಾವುದಾದರೊಂದು ಕೆಲಸಕೆ ನೇಮಿಸಲ್ಪಟ್ಟ; ಪ್ರಸಿದ್ಧ.

**नामधाम** - ಪು० ಹೆಸರು ಮತ್ತು ಸ್ಥಳ; ವಿಳಾಸ; ಪತ್ತೆ.

**नामर्द** - ವಿ० ನಪುಂಸಕ; ಹೇಡಿ.

**नामर्दी** - ಸ್ತ್ರೀ० ನಪುಂಸಕತನ.

**नाम व निशान** - ಪು० ಹೆಸರು ಮತ್ತು ಗುರುತು; ಪತ್ತೆ.

**नामवर** - ವಿ० ಹೆಸರುಳ್ಳ; ಪ್ರಸಿದ್ಧ.

**नामवरी** - ಸ್ತ್ರೀ० ಪ್ರಸಿದ್ಧಿ; ಹೆಸರುವಾಸಿ.

**नामशेष** - ವಿ० ಹೆಸರು ಮಾತ್ರ ಉಳಿದಿರುವ; ಗತಿಸಿದ.

**ना-महदूद** - ವಿ० ಮೇರೆಯಿಲ್ಲದ; ಅಪಾರ.

**नामा** - ಪು० ಪತ್ರ; ಗ್ರಂಥ.

**नामाकूल** - ವಿ० ಅಯೋಗ್ಯ; ಅನುಚಿತ.

**नामानिगार** - ವಿ० ಸುದ್ದಿಗಾರ; ಬಾತ್ಮೀದಾರ.

**ना-मालूम** - ವಿ० ಗೊತ್ತಿಲ್ಲದ; ತಿಳಿಯದ; ಅಪರಿಚಿತ.

**नामी** - वि० ಹೆಸರಿನ; ಹೆಸರುವಾಸಿಯಾದ;—**गिरामी** - ಸುಪ್ರಸಿದ್ಧ.

**ना-मुनासिब** - वि० ಸರಿಯಲ್ಲದ; ಅನುಚಿತ.

**ना-मुबारक** - वि० ಅಶುಭ; ಅಮಂಗಳ.

**ना-मुमकिन** - वि० ಅಸಂಭಾವ್ಯ; ಆಗದ ಹೋಗದ.

**ना-मुराद** - वि० ನಿಷ್ಫಲ; ವ್ಯರ್ಥ.

**ना-मुवाफ़िक़** - वि० ವಿರುದ್ಧ; ಪ್ರತಿಕೂಲ.

**नामूस** - स्त्री० ಗೌರವ; ಮಾನ; ಪಾತಿವ್ರತ್ಯ.

**नामूसी** - स्त्री० ಅಗೌರವ; ಅವಮಾನ.

**ना-मेहरबान** - वि० ದಯೆಯಿಲ್ಲದ.

**नामोनिशान** - पु० ಗುರುತು; ಪತ್ತೆ; —**न रहना** - ನಿರ್ನಾಮವಾಗು.

**नायक** - पु० ಮುಂದಾಳು; ಅಧಿಪತಿ

**नायब** - पु० ಯಾವನಾದರೊಬ್ಬನಿಗೆ ಬದಲಾಗಿ ಕೆಲಸಮಾಡುವವ; ಸಹಾಯಕ.

**नायबी** - स्त्री० ಬದಲೀ ಕೆಲಸ.

**नायाब** - वि० ಬೇಗನೆ ದೊರಕದ; ಅಪ್ರಾಪ್ಯ.

**नायिका** - स्त्री० ಮುಖಂಡಳು; ಸುಂದರ ಸ್ತ್ರೀ; ಕಥಾನಾಯಕಿ.

**नारंग** - पु० ಕಿತ್ತಳೆ; ಕೆಮ್ಮೊಲಂಗಿ; ಪಿಪ್ಪಲಿ.

**नारंगी** - स्त्री० ಕಿತ್ತಳೆ.

**नार** - स्त्री० ಕುತ್ತಿಗೆ; ಕೊರಳು. पु० ಹಗ್ಗ; ಲಾಡಿ.

**नारक** - पु० ನರಕದಲ್ಲಿರುವವನು.

**नारना** - स० ಆಳ ನೋಡು; ಗೊತ್ತು ಹಚ್ಚು.

**नारा** - पु० ಲಾಡಿ; ನೊಗದ ಹಗ್ಗ; ಘೋಷ; ಜಯಜಯಕಾರ.

**नाराज़** - वि० ಅಪ್ರಸನ್ನ; ಅಸಂತುಷ್ಟ; ಸಿಟ್ಟಾದ.

**नाराज़गी** } स्त्री० ಕೋಪ; ಅಸಮಾಧಾನ.
**नाराज़ी** }

**नारियल** - पु० ತೆಂಗಿನಕಾಯಿ; ನಾರಿಕೇಳ.

**नारियली** - स्त्री० ತೆಂಗಿನಕಾಯಿಯ ಬುರುಡೆ; ಕೊಬ್ಬರಿ; ತೆಂಗಿನ ಹೆಂಡ.

**नारी** - स्त्री० ಹೆಂಗಸು; ಮಹಿಳೆ.

**नारू** - पु० ನಾರುಹುಣ್ಣು ಎಂಬ ರೋಗ.

**नाल** - स्त्री० ದಂಟು; ಕಾಂಡ; ನಳಿಗೆ; ಕೊಳವಿ; ಹೊಕ್ಕಳು; ಲಾಳ. पु० ಹೊಕ್ಕಳು ಬಳ್ಳಿ; ನಾಲೆ; ಮೋರಿ.

**नालबंद** - पु० ಲಾಳ ಕಟ್ಟುವವನು.

**नालबंदी** - स्त्री० ಲಾಳ ಕಟ್ಟುವ ಕೆಲಸ.

**नालकी** - स्त्री० ಒಂದು ವಿಧವಾದ ಪಾಲಕಿ.

**नाला** - वि० ಅಳುತ್ತಿರುವ; ದುಃಖಿಸುತ್ತಿರುವ.

नाला - पु० ಜಲಪ್ರವಾಹದ ನಾಲೆ; ಚಿಕ್ಕನದಿ; ಕಾಲುವೆ.

नालायक - वि० ಕೆಲಸಕ್ಕೆಬಾರದ; ಮೂರ್ಖ.

नालिका - स्त्री० ಚಿಕ್ಕದಂಟು; ಕೊಳವಿ; ನಳಿಗೆ.

नालिश - स्त्री० ಫಿರ್ಯಾದು; ದೂರು; ದಾವೆ.

नालिशी - वि० ದಾವೆಮಾಡುವವನು

नाली - स्त्री० ಚಿಕ್ಕನಾಲೆ ಅಥವಾ ಕಾಲುವೆ; ಕೊಳವಿ; ನಳಿಗೆ; ರಕ್ತನಾಳ; ನಾಡಿ; ಗಡಿಯಾರ; ಕಮಲ.

नालौट - वि० ಭಾಷೆಗೆತಪ್ಪುವವನು; ಮಾತುಕೊಟ್ಟು ಮೋಸಮಾಡುವವನು

नाव - स्त्री० ದೋಣಿ; ನಾವೆ; ನೌಕೆ.

नावघाट - पु० ದೋಣಿಗಳು ನಿಲ್ಲುವ ಸ್ಥಳ; ದಂಡೆ.

नावक - पु० ಒಂದುವಿಧವಾದ ಬಾಣ; ನಾವಿಕ.

नावना - स० ಬಗ್ಗಿಸು.

नावर - स्त्री० ದೋಣಿ; ತೆಪ್ಪ.

नावाकिफ़ - वि० ಪರಿಚಯವಿಲ್ಲದ; ತಿಳಿಯದ.

नावाजिब - वि० ಸರಿಯಲ್ಲದ; ಅನುಚಿತ.

नाश - पु० ಕೇಡು; ಅಳಿವು.

नाशक - वि० ನಾಶಮಾಡುವವ

नाशपाती - स्त्री० ಮರಸೇಬು; ಬೇರಿಕಾಯಿ.

नाशवान् - वि० ಅನಿತ್ಯವಾದ; ನಶ್ವರವಾದ

ना शाइस्ता - वि० ಅಸಭ್ಯತನದ; ಅನುಚಿತವಾದ.

ना-शाद - वि० ಅಪ್ರಸನ್ನ.

नाश्ता - पु० ಬೆಳಿಗಿನ ಫಲಾಹಾರ; ಉಪಹಾರ; ತಿಂಡಿ; ತೀರ್ಥ.

नास - स्त्री० ನಶ್ಯ; ನಶ್ಯದಪುಡಿ.

नासदान - पु० ನಶ್ಯದ ಡಬ್ಬಿ.

नासना - स० ನಾಶಪಡಿಸು.

नासबूर - वि० ಅಶಾಂತ; ಸಮಾಧಾನವಿಲ್ಲದ.

ना-समझ - वि० ಬುದ್ಧಿಹೀನ; ಮೂರ್ಖ.

ना-समझी - स्त्री० ಮೂರ್ಖತನ; ತಿಳಿಗೇಡಿತನ.

नासह - वि० ಉಪದೇಶಮಾಡುವವ.

नासा - स्त्री० ಮೂಗು.

ना-साज़ - वि० ಅಸ್ವಸ್ಥ; ಬೇನೆಯುಳ್ಳ.

नासापुट - पु० ಮೂಗಿನ ಹೊಳ್ಳೆ.

नासिका - स्त्री० ಮೂಗು.

नासिख - पु० ಲೇಖಕ; ಹಾಳುಮಾಡುವವ.

नासीर - पु० ಸೇನಾನಾಯಕನ ಮುಂದೆ ಜಯಘೋಷವನ್ನು ಮಾಡುತ್ತಾ ಹೋಗುವ ದಳ.

**नासूर** - पुं॰ ಸೋರುತ್ತಿರುವ ಗಾಯ; ನಾಡೀ ವ್ರಣ.

**नास्तिक** - पुं॰ ಪರಮಾತ್ಮ ಪರಲೋಕ ಪುನರ್ಜನ್ಮಾದಿಗಳನ್ನು ನಂಬದವನು.

**नाहजार** - वि॰ ನೀಚತನದ; ಕೆಟ್ಟ ನಡತೆಯ.

**नाहक़** - क्रि॰ ವ್ಯರ್ಥವಾಗಿ; ನಿಷ್ಪ್ರಯೋಜನವಾಗಿ.

**नाहनूह** - स्त्री॰ 'ಇಲ್ಲ ಇಲ್ಲ' ಅನ್ನುವ ಶಬ್ದ.

**ना-हमवार** - वि॰ ಎತ್ತುತಗ್ಗಾದ; ಏರಿಳಿತಗಳಿರುವ.

**नाहर** - पुं॰ ಸಿಂಹ; ಹುಲಿ.

**नाहीं** - अव्य॰ ಇಲ್ಲ; ಅಲ್ಲ.

**निंदक** - पुं॰ ನಿಂದಿಸುವವನು.

**निंदन** - पुं॰ ನಿಂದನೆ; ದೂಷಣೆ.

**निंदना** - स॰ ನಿಂದಿಸು.

**निंदनीय** - वि॰ ನಿಂದಿಸತಕ್ಕ; ಗರ್ಹಣೀಯವಾದ.

**निंदरना** - स॰ ನಿಂದಿಸು.

**निंदा** - स्त्री॰ ನಿಂದೆ; ಅಪವಾದ; ಅಪಕೀರ್ತಿ.

**निंदाई** - स्त्री॰ ಕಳೆತೆಗೆಯುವುದು.

**निंदासा** - वि॰ ತೂಕಡಿಕೆಯ ಅಥವಾ ನಿದ್ದೆಗಣ್ಣಿನವನು.

**निंदित** - वि॰ ನಿಂದಿಸಲ್ಪಟ್ಟ; ದೂಷಿತವಾದ.

**निंदिया** - स्त्री॰ ನಿದ್ದೆ; ತೂಕಡಿಕೆ.

**निंब** - स्त्री॰ ಬೇವು.

**निंबू** - पुं॰ ನಿಂಬೆ ಹಣ್ಣು.

**निःस्पृह** - वि॰ ಇಚ್ಛಾರಹಿತವಾದ; ಪ್ರತಿಫಲಾಪೇಕ್ಷೆಯಿಲ್ಲದ.

**निःस्वार्थ** - वि॰ ಸ್ವಾರ್ಥರಹಿತವಾದ.

**निअर** - अव्य॰ ಸಮೀಪ; ಹತ್ತಿರ.

**निअराना** - स॰ ಸಮೀಪಿಸು; ಹತ್ತಿರ ಬರು.

**निआना** - पुं॰ ಕೊನೆ; ಪರಿಣಾಮ. अव्य॰ ಕೊನೆಗೆ.

**निआमत** - स्त्री॰ ಉತ್ತಮೋತ್ತಮವಾದ ಪದಾರ್ಥ; ಅಲಭ್ಯವಸ್ತು.

**निकट** - क्रि॰ ಬಳಿಯ; ಹತ್ತಿರ; ಸಮೀಪ.

**निकम्मा** - वि॰ ಕೆಲಸಕ್ಕೆ ಬಾರದ; ಕೆಟ್ಟ.

**निकर** - पुं॰ ಸಮೂಹ; ಗುಂಪು.

**निकरिस** - पुं॰ ಕಾಲಿನಲ್ಲಿ ಆಗುವ ಒಂದುಬಗೆಯ ಕೀಲುವಾಯುವು.

**निकर्मा** - वि॰ ನಿರುದ್ಯೋಗಿ; ಸೋಮಾರಿ.

**निकलना** - अ॰ ಹೊರಗೆ ಬರು; ಹೊರಡು; ಹೊರಗಾಗು; ಹೊಮ್ಮು; ಹುಟ್ಟು; ಹೋಗು; ಪ್ರಕಟವಾಗು; ಸಿದ್ಧವಾಗು; ಕಳೆದುಹೋಗು.

**निकलवाना** - स॰ ಬೇರೆಯವರ ಮುಖಾಂತರ ಹೊರಡಿಸು.

**निकाई** - स्त्री॰ ಸೌಂದರ್ಯ; ಚೆಲುವು.

**निकाज** - वि॰ ಕೆಲಸವಿಲ್ಲದವ.

**निकाना** - ಸಂ ಕಳಿ ತೆಗೆ; ಕೀಳು.

**निकाम** - ವಿಂ ಕೆಲಸವಿಲ್ಲದ; ಕೆಲಸಕ್ಕೆ ಬಾರದ; ವ್ಯರ್ಥ. **ಕ್ರಿಂ** ವ್ಯರ್ಥವಾಗಿ.

**निकाय** - ಪುಂ ಸಮೂಹ; ರಾಶಿ; ಗುಂಪು; ಮನೆ; ಪರಮಾತ್ಮ.

**निकाल** - ಪುಂ ಹೊರಡಿಸುವಿಕೆ; ಸಾಗಿಸುವಿಕೆ; ಉಪಾಯ.

**निकालन** - ಸ್ತ್ರೀಂ ಹೊರಗೆಡಹಿದ ಅಥವಾ ತೆಗೆಯಲ್ಪಟ್ಟ.

**निकालना** - ಸಂ ಹೊರಡಿಸು; ಹೊರಪಡಿಸು; ತೆಗೆ; ಕಲ್ಪಿಸು.

**निकाला** - ಪುಂ ಬಹಿಷ್ಕಾರ; ಹೊರಗೆ ಹಾಕುವ ಕೆಲಸ.

**निकास** - ಪುಂ ಹೊರಡುವಿಕೆ; ಹೊರಡುವ ದಾರಿ; ಮೈದಾನ; ಮೂಲಸ್ಥಾನ; ಬಿಡುಗಡೆಯ ಉಪಾಯ.

**निकासी** - ಸ್ತ್ರೀಂ ಹೊರಡುವಿಕೆ; ಪ್ರಸ್ಥಾನ; ಆದಾಯ; ಲಾಭ; ಬಿಕರಿ; ಮಾರಾಟ; ಸುಂಕ.

**निकाह** - ಪುಂ ಮುಸಲ್ಮಾನರ ಪದ್ಧತಿಯಂತೆ ನೆರವೇರುವ ಮದುವೆ.

**निकियाना** - ಸಂ ಕಿತ್ತುಹಾಕು; ಎಳೆಯೆಳೆಯಾಗಿ ಬಿಡಿಸು.

**निकुंज** - ಪುಂ ಲತಾಮಂಡಪ; ಹೂಬಳ್ಳಿಯ ಮನೆ; ಉದ್ಯಾನ.

**निकेतन** - ಪುಂ ನಿವಾಸಸ್ಥಲ; ಮನೆ.

**निकृष्ट** - ವಿಂ ನೀಚ.

**निकोसना** - ಸಂ ಹಲ್ಲುಕಿರಿ; ಹಲ್ಲು ಕಿಸಿ.

**निक्षिप्त** - ವಿಂ ಬಿಸಾಡಿರುವ; ಹಾಕಿಬಿಟ್ಟಿರುವ.

**निक्षेप** - ಪುಂ ಬಿಸಾಡುವಿಕೆ; ಹಾಕಿಬಿಡುವಿಕೆ; ಅಡವು; ಅಮಾನತ್ತು.

**निखंग** - ಪುಂ ಬತ್ತಳಿಕೆ.

**निखट्टू** - ವಿಂ ದಾರಿಗೆ ಬಾರದವ; ಕೆಲಸಗಳ್ಳ; ತನ್ನ ಮೈಗಳ್ಳತನದಿಂದ ಎಲ್ಲಿಯೂ ನೆಲೆಯಾಗದವ.

**निखरना** - ಅಂ ನಿರ್ಮಲವಾಗು; ಸ್ವಚ್ಛವಾಗು.

**निखरवाना** - ಸಂ ನಿರ್ಮಲಗೊಳಿಸು.

**निखरी** - ಸ್ತ್ರೀಂ ಘೃತಪಕ್ವ; ತುಪ್ಪದಲ್ಲಿ ಕರೆದದ್ದು.

**निखार** - ಪುಂ ಸ್ವಚ್ಛತೆ; ನಿರ್ಮಲತೆ.

**निखारना** - ಸಂ ಸ್ವಚ್ಛಮಾಡು.

**निखालिस** - ವಿಂ ಪರಿಶುದ್ಧ; ನಿರ್ಮಲ.

**निखिल** - ವಿಂ ಅಖಿಲ; ಸಂಪೂರ್ಣ.

**निखोट** - ವಿಂ ನಿರ್ದೋಷ; ಸ್ಪಷ್ಟ. **ಕ್ರಿಂ** ನಿಸ್ಸಂಕೋಚವಾಗಿ; ನಿಷ್ಕಪಟವಾಗಿ.

**निगदना** - ಸಂ ಒಳಗೆ ಅರಳೆಯನ್ನು ತುಂಬಿಸಿ ಹೊಲಿಯುವುದು.

**निगड़** - ಸ್ತ್ರೀಂ ಆನೆಯ ಕಾಲುಗಳನ್ನು ಬಿಗಿಯುವ ಸರಪಳಿ; ಬೇಡಿ.

**निगरां** - ಪುಂ ರಕ್ಷಕ; ಮೇಲ್ವಿಚಾರಣೆ ಮಾಡತಕ್ಕವನು.

**निगरानी** - स्त्री० ಕಣ್ಣೋಟ; ಕಣ್ಗಾವಲು; ನಿರೀಕ್ಷಣೆ; ಮೇಲ್ವಿಚಾರಣೆ.

**निगरु** - वि० ಹಗುರ; ಭಾರಕಡಿಮೆಯಾದ.

**निगलना** - स० ನುಂಗಿಬಿಡು; ತಿಂದುಬಿಡು.

**निगह** - स्त्री० ದೃಷ್ಟಿ.

**निगहबान** - पु० ಕಾಪಾಡುವವ.

**निगहबानी** - स्त्री० ಮೇಲ್ಗಾವಲು; ಸಂರಕ್ಷಣೆ.

**निगार** - पु० ಚಿತ್ರ; ಕಸೂತಿ;—**ए-आलम** - ಸಂಸಾರದಲ್ಲಿ ಅತ್ಯಧಿಕ ಸುಂದರವಾದ.

**निगाली** - स्त्री० ಗುಡಗುಡಿಯ ಕೊಳವೆ.

**निगाह** - स्त्री० ದೃಷ್ಟಿ; ಕೃಪಾದೃಷ್ಟಿ; ಗಮನ; ನಿಗಾ; ನೋಟ

**निगुनी** - वि० ಗುಣರಹಿತವಾದ.

**निगूढ़** - वि० ಅತ್ಯಂತ ಗುಪ್ತವಾದ.

**निगोड़ा** - वि० ಭಾಗ್ಯಹೀನ; ಗುರುಹಿರಿಯರಾರೂ ಇಲ್ಲದವನು; ಅನಾಥ; ದಿಕ್ಕುದೆಶೆಯಿಲ್ಲದ.

**निग्रह** - पु० ತಡೆ; ಅಡ್ಡಿ; ದಮನ; ಚಿಕಿತ್ಸೆ; ಬಂಧನ.

**निघंटु** - पु० ಶಬ್ದಕೋಶ; ಶಬ್ದಸಂಗ್ರಹ.

**निघटना** - अ० ಕಡಿಮೆಯಾಗು; ಇಳಿ; ಕುಗ್ಗು.

**निघरघट** - वि० ಮನೆಮಠಗಳಿಲ್ಲದವನು; ದಿಕ್ಕಿಲ್ಲದವ; ನಾಚಿಕೆಯಿಲ್ಲದವ.

**निघरा** - वि० ದಿಕ್ಕಿಲ್ಲದವ; ಅನಾಥ.

**निचय** - पु० ಸಮೂಹ; ಸಂಚಯ; ನಿಶ್ಚಯ.

**निचला** - वि० ಕೆಳಗಣ.

**निचाई** - स्त्री० ತಗ್ಗು; ನೀಚತನ; ಆಳ; ಕೀಳುತನ.

**निचान** - स्त्री० ತಗ್ಗು; ಇಳಿಜಾರು; ಇಳಕಲು.

**निचिंत** - वि० ನಿಶ್ಚಿಂತೆಯಾದ.

**निचुड़ना** - अ० ಹಿಂಡಿಹೋಗು; ಬತ್ತಿಹೋಗು.

**निचोड़** - पु० ಹಿಂಡಿದ್ದು; ಸಾರ; ಸತ್ವ; ಸಾರಾಂಶ.

**निचोड़ना**, **निचोरना** - स० ಹಿಂಡು; ಕಿವುಚು.

**निचोल** - पु० ಹೆಂಗಸರ ವಸ್ತ್ರ; ಅಡ್ಡಸೆರಗು

**निचौहाँ** - वि० ಕೆಳಗೆ ಬಗ್ಗಿಸಿದ; ಬಗ್ಗಿದ; ಬಾಗಿದ.

**निछक्का** - पु० ಶುದ್ಧವಾದ; ನಿರ್ಜನ ಪ್ರದೇಶ.

**निछल** - वि० ನಿಷ್ಕಪಟ.

**निछावर** - स्त्री० ನಿವಾಳಿಸುವಿಕೆ; ಇಳಿತೆಗೆಯುವಿಕೆ; ಇನಾಮು;—**होना** - ಬಲಿಯಾಗು.

**निछोह**, **निछोही** - वि० ನಿಷ್ಠುರ.

**निज** - वि० ತನ್ನ; ಸ್ವಕೀಯ; ಸ್ವಂತದ; ಮುಖ್ಯವಾದ.

**निज़ाबत** - स्त्री० ಸತ್ಕ್ಕಲ.

**निज़ाम** - पु० ಏರ್ಪಾಡು ; ವ್ಯವಸ್ಥೆ ; ಮುತ್ತಿನಸರ ; ಅಸ್ತಿವಾರ.

**निज़ामत** - स्त्री० ವ್ಯವಸ್ಥೆ ; ವ್ಯವಸ್ಥಾಪಕರ ಕೆಲಸ.

**निजी** - वि० ಸ್ವಂತದ.

**निझरना** - अ० ಉದುರಿ ಬೀಳು ; ಒಣಗಿ ಹೋಗು.

**निझाना** - अ० ಮರೆಯಲ್ಲಿ ಇಣಿಕಿ ನೋಡು.

**निझोटना** - स० ಎಳೆದು ಕಸುಗೊಳ್ಳು.

**निठल्ला** / **निठल्लू** } वि० ಕೆಲಸವಿಲ್ಲದ; ನಿರುದ್ಯೋಗಿ.

**निठाला** - पु० ಕೆಲಸವಿಲ್ಲದವ; ವರಮಾನವಿಲ್ಲದ ಕಾಲ ; ಬಿಡುವು ; ಅವಕಾಶ.

**निठुर** - वि० ಕಠೋರ ಹೃದಯದ.

**निठुराई** - स्त्री० ಕ್ರೂರತೆ.

**निठौर** - पु० ಕೆಟ್ಟಜಾಗ; ಕೇಡುಗಾಲ.

**निडर** - वि० ಅಂಜಿಕೆಯಿಲ್ಲದ; ಸಾಹಸವುಳ್ಳ.

**निडीन** - पु० ಪಕ್ಷಿ ಅಥವಾ ವಿಮಾನ ನಿಧಾನವಾಗಿ ಇಳಿಯುವಿಕೆ.

**निढ़ाल** - वि० ಬಿದ್ದುಹೋದ; ಶಿಥಿಲ; ಆಯಾಸಗೊಂಡ.

**नितंब** - पु० ಮುಕುಳಿ; ಕುಂಡಿ; ಭುಜ; ಪರ್ವತದ ಇಳಿಜಾರು ಪ್ರದೇಶ.

**नित** - अव्य० ಪ್ರತಿದಿನವೂ.

**नितराम** - अव्य० ಸರ್ವದಾ;ಯಾವಾಗಲೂ.

**नितांत** - वि० ಅತ್ಯಂತ; ಸರ್ವಥಾ.

**नित्य** - वि० ಯಾವಾಗಲೂ; ಸದಾ.

**नित्यता** - स्त्री० ಶಾಶ್ವತವಾಗಿರುವಿಕೆ.

**निथरना** - अ० ತಿಳಿಗಟ್ಟು ; ತಿಳಿಯಾಗು ; ತೇಟಿಯಾಗು.

**निथार** - पु० ತಿಳಿಗಟ್ಟಿದ ನೀರು.

**निथारना** - स० ತಿಳಿಯಿಡು ; ತೇರಿಕ್ಕು.

**निदरना** - स० ಅನಾದರ ಮಾಡು ; ತಿರಸ್ಕರಿಸು.

**निदर्शन** - पु० ದೃಷ್ಟಾಂತ ; ತೋರಿಸುವಿಕೆ.

**निदाहना** - स० ಉರಿಸು ; ಸುಡು.

**निदाघ** - पु० ಉಷ್ಣ ; ಬಿಸಿಲು.

**निदान** - पु० ಆದಿಕಾರಣ; ರೋಗದ ಲಕ್ಷಣ.

**निर्देश** - पु० ಆಜ್ಞೆ ; ಶಾಸನ.

**निद्रा** - स्त्री० ನಿದ್ದೆ ; ನಿದ್ರೆ.

**निद्रालु** - वि० ನಿದ್ರಿಸುವವನು.

**निद्रित** - वि० ನಿದ್ರೆಮಾಡುತ್ತಿರುವ.

**निधड़क** - क्रि० ತಡೆಯಿಲ್ಲದೆ; ಸ್ವಲ್ಪವೂ ಹೆದರಿಕೆಯಿಲ್ಲದೆ.

**निधन** - पु० ನಾಶ; ಮರಣ. वि० ಧನಹೀನವಾದ.

**निधनी** - वि० ದರಿದ್ರ.

**निधान** - पु० ಆಧಾರ; ಆಶ್ರಯ; ಲಯಸ್ಥಾನ; ನಿಧಿ.

**निधि** - स्त्री० ಹೂತಿಟ್ಟ ದ್ರವ್ಯ ; ನವರತ್ನಗಳು ; ಸಮುದ್ರ.

**निनय** - ಸ್ತ್ರೀ೦ ವಿನಯು; ವಿಧೇಯತೆ.

**निनरा** - ವಿ೦ ಪ್ರತ್ಯೇಕ; ಬೇರೆ.

**निनाद** - ಪು೦ ಶಬ್ದ; ಧ್ವನಿ.

**निनान** - ಪು೦ ಅಂತ್ಯ; ಅವಸಾನೆ; ಲಕ್ಷಣ. ಕ್ರಿ೦ ಕೊನೆಗೆ. ವಿ೦ ಸರ್ವಥಾ; ಮೊದಲನೆಯ.

**निनाया** - ಪು೦ ತಿಗಣೆ.

**निनारा** - ವಿ೦ ಪ್ರತ್ಯೇಕವಾದ; ಬೇರೆ; ಭಿನ್ನ; ದೂರವಾದ.

**निनावाँ** - ಪು೦ ನಾಲಿಗೆಯಲ್ಲಿ ಮತ್ತು ದವಡೆಯ ಒಳಗಡೆ ಏಳುವ ಸಣ್ಣ ಗುಳ್ಳೆಗಳು; ಬಾಯಿ ಹುಣ್ಣು.

**निनावीं** - ಸ್ತ್ರೀ೦ ಹೆಸರಿಲ್ಲದ ವಸ್ತು; ಪಿಶಾಚಿ.

**निनौना** - ಸ೦ ಬಗ್ಗಿಸು.

**निनौरा** - ಪು೦ ಅಜ್ಜಿಯ ಮನೆ.

**निपंग** - ವಿ೦ ಅಂಗಹೀನ; ಕೆಲಸಕ್ಕೆ ಬಾರದ.

**निपजना** - ಅ೦ ಹುಟ್ಟು; ವೃದ್ಧಿಯಾಗು; ಸಿದ್ಧವಾಗು.

**निपट** - ಅ೦ ಕೇವಲ; ಪರಿಶುದ್ಧವಾದ; ಬರೇ; ಸರ್ವಥಾ; ಅತ್ಯಂತ.

**निपटना** - ಅ೦ ಪೂರೈಸು; ಕೊನೆಗಾಣಿಸು.

**निपटाना** - ಸ೦ ಪೂರ್ತಿಮಾಡಿಸು; ಕೊನೆಗಾಣುವಂತೆ ಮಾಡು.

**निपटारा** - ಪು೦ ಫೈಸಲಾತಿ; ತೀರ್ಮಾನ.

**निपात** - ಪು೦ ಪತನ; ವಿನಾಶ.

**निपाती** - ವಿ೦ ಬೀಳಿಸುವವನು; ಘಾತಕ. ಪು೦ ಶಿವ.

**निपान** - ಪು೦ ಕೊಳ; ನೀರಿನತೊಟ್ಟಿ; ಹಾಲು ಕರೆಯುವ ಪಾತ್ರೆ.

**निपीड़क** - ವಿ೦ ಪೀಡಿಸುವವ; ದುಃಖದಾಯಕ.

**निपीड़ना** - ಸ೦ ಒತ್ತು; ದಬಾಯಿಸು; ಪೀಡಿಸು.

**निपूत** / **निपूता** - ವಿ೦ ಪುತ್ರಹೀನ; ಮಕ್ಕಳಿಲ್ಲದ.

**निफरना** ಅ೦ ಭೇದಿಸಿಕೊಂಡು ಹೊರಡು; ಹೊರಸಾಸು.

**निफाक़** - ಪು೦ ಭೇದಭಾವ; ಒಡಕು; ವೈಮನಸ್ಯ.

**निबंध** - ಪು೦ ಬಂಧನ; ಲೇಖನ; ಪ್ರಬಂಧ; ಗೀತ.

**निबंधन** - ಪು೦ ನಿರ್ಬಂಧ; ನಿಬಂಧನೆ.

**निबकौरी** - ಸ್ತ್ರೀ೦ ಬೇವಿನ ಹಣ್ಣು.

**निबख़्ता** - ವಿ೦ ನಿರ್ಭಾಗ್ಯ.

**निबटना** - ಅ೦ ನಿವೃತ್ತನಾಗು; ಪೂರೈಸು; ಮುಕ್ತಾಯವಾಗು.

**निबटाना** - ಸ೦ ಮುಕ್ತಾಯಗೊಳಿಸು; ಮುಗಿಸು; ತೀರಿಸು.

**निबटारा** / **निबटाव** / **निबटेरा** - ಪು೦ ತೀರ್ಮಾನ; ನಿರ್ಣಯ; ಫೈಸಲು.

**निबद्ध** - ವಿ೦ ಬಂಧಿತವಾದ; ತಡೆಯಲ್ಪಟ್ಟ.

**निबरना** - ಅ೦ ಬಿಡುಗಡೆ ಹೊಂದು; ತೊಡಕು ದೂರವಾಗು; ಪೂರ್ಣವಾಗು; ಅಳಿದುಹೋಗು.

निबहना - अ० ಪಾರಾಗು ; ನಿರ್ವ ಹಿಸು

निबाह - वि० ನಿರ್ವಾಹ;ಕಾಲಕ್ಷೇಪ.

निबाहक - वि० ನಿರ್ವಾಹಕ.

निबाहना - स० ನಿರ್ವಾಹ ಮಾಡು ; ನಿಭಾಯಿಸು.

निबिड़ - वि० ಘನ ; ದಟ್ಟ; ನಿಬಿಡ.

निबुआ - पु० ನಿಂಬೆ.

निबेड़ना - स० ಬಂಧನದಿಂದ ಬಿಡಿಸು; ಬೇರೆ ಬೇರೆ ಮಾಡು ; ನಿರ್ಣಯಿಸು ; ತ್ಯಜಿಸು ; ಪೂರ್ತಿಗೊಳಿಸು.

निबेड़ा - पु० ಬಿಡುಗಡೆ ; ಮುಕ್ತಿ ; ಬೇರೆ ಬೇರೆಮಾಡುವಿಕೆ.

निबेरा - पु० ಬಿಡುಗಡೆ.

निबौरी - स्त्री० ಬೇವಿನ ಹಣ್ಣು

निभना - अ० ನಿರ್ವಾಹವಾಗು ; ಪಾರುಗಾಣು ; ನೆರವೇರು.

निभरोस | निभरोसी - वि० ಭರವಸೆಯಿಲ್ಲದ ; ಆಶಾರಹಿತವಾದ.

निभाग - वि० ನಿರ್ಭಾಗ್ಯ ; ಭಾಗ್ಯಹೀನ.

निभाना - स० ನಿರ್ವಾಹವಮಾಡು ; ನಿಭಾಯಿಸು ; ಕೊನೆಗಾಣಿಸು.

निभाव - पु० ನಿರ್ವಾಹ ; ನಿಭಾಯಿಸುವಿಕೆ.

निभृत - वि० ಗುಪ್ತವಾದ ; ನಿರ್ಜನ ಪ್ರದೇಶ.

निमंत्रण - पु० ಆಮಂತ್ರಣ ; ಆಹ್ವಾನ.

निमंत्रणपत्र - पु० ಆಹ್ವಾನ ಪತ್ರಿಕೆ.

निमंत्रित - वि० ಆಮಂತ್ರಿಸಲ್ಪಟ್ಟ.

निमक - पु० दे० नमक.

निमकी - स्त्री० ನಿಂಬೆಹಣ್ಣಿನ ಉಪ್ಪಿನಕಾಯಿ.

निमकौड़ी - स्त्री० ಬೇವಿನ ಹಣ್ಣು.

निमग्न - वि० ತನ್ಮಯ; ಮುಳುಗಿದ.

निमज्जन - पु० ನೀರೊಳಗೆ ಮುಳುಗಿ ಮಾಡತಕ್ಕ ಸ್ನಾನ.

निमटना - अ० दे० निपटना.

निमाना - वि० ತಗ್ಗು ; ಇಳಿಜಾರು ; ವಿಧೇಯ ; ಮೊದ್ದು ಸ್ವಭಾವದ.

निमित्त - पु० ಕಾರಣ ; ಉದ್ದೇಶ್ಯ.

निमिष - पु० ಒಂದುಕ್ಷಣ ; ಕಣ್ಣು ಮುಚ್ಚಿ ತೆರೆಯುವಷ್ಟು ಸಮಯ; ಕಣ್ಣುರೆಪ್ಪೆ.

निमुहाँ - वि० ಮಾತನಾಡದವನು ; ಮಿತಭಾಷಿ ; ಮೌನಿ.

निमेष - पु० ಕಣ್ಣುರೆಪ್ಪೆಯನ್ನು ಮುಚ್ಚುವುದು.

निम्न - वि० ಕೆಳಗೆ ; ಕೆಳಗಡೆ.

निम्नलिखित - वि० ಕೆಳಗೆ ಬರೆದಿರುವ.

नियंता - पु० ನಿಯಮವನ್ನು ವಿಧಿಸುವವ; ಶಾಸಕ.

नियंत्रण - पु० ನಿಯಮ ; ಕಟ್ಟು.

नियंत्रित - वि० ನಿಯಮಕ್ಕೆ ಒಳಪಟ್ಟಿರುವ.

नियत - वि० ನಿರ್ದಿಷ್ಟ; ಗೊತ್ತಾದ; ನಿಶ್ಚಿತವಾದ.

**नियति** - ಸ್ತ್ರೀ० ನಿಶ್ಚಿತವಾಗುವಿಕೆ; ನಿರ್ಣಯ; ಭಾಗ್ಯ.

**नियम** - ಪುಂ० ಕಟ್ಟು; ವಿಧಿ; ನಿಶ್ಚಿತವಾದ ನೀತಿ; ಶಾಸನ.

**नियमबद्ध** - ವಿ० ನಿಯಮಗಳಿಗೊಳಗಾದ.

**नियमन** - ಪುಂ० ಆಡಳಿತ, ನಿಯಮಕ್ಕೆ ಒಳಪಡಿಸಿದ.

**नियराई** - ಸ್ತ್ರೀ० ಸಾಮೀಪ್ಯ.

**नियराना** - ಅ० ಸಮೀಪಿಸು; ತಲಪು.

**नियाज़** - ಸ್ತ್ರೀ० ಪ್ರೀತಿ; ವಿನಂತಿ; ನಮ್ರತೆ.

**नियाज़मन्द** - ವಿ० ನಮ್ರ; ವಿನೀತ.

**नियाबत** - ಸ್ತ್ರೀ० ಪ್ರಾತಿನಿಧ್ಯ; ಬದಲಿ.

**नियाम** - ಪುಂ० ಖಡ್ಗಕೋಶ; ಒರೆ.

**नियामक** - ಪುಂ० ವ್ಯವಸ್ಥಾಪಕ.

**नियामत** - ಸ್ತ್ರೀ० ಅಲಭ್ಯ ವಸ್ತು; ಭರ್ಜರಿ ಊಟ; ಐಶ್ವರ್ಯ.

**नियार** - ಪುಂ० ಚಿನಿವಾರ ಅಥವಾ ಅಕ್ಕಸಾಲೆಯ ಅಂಗಡಿಯಲ್ಲಿನ ಚಿನ್ನದಪುಡಿ ಸೇರಿದ ಮಣ್ಣು.

**नियारा** - ವಿ० ಬೇರೆ; ಪೃಥಕ್; ದೂರ.

**नियारिया** - ಪುಂ० ಒಟ್ಟುಸೇರಿದ ವಸ್ತುಗಳನ್ನು ಬೇರೆಬೇರೆಯಾಗಿ ಬಿಡಿಸುವವನು; ಚಿನ್ನಬೆಳ್ಳಿ ಬೆರತ ಮಣ್ಣಿನಿಂದ ಚಿನ್ನಬೆಳ್ಳಿಯ ಪುಡಿ ಚೂರನ್ನು ಆರಿಸುವವನು; ಜಾಣ; ಚತುರ.

**नियुक्त** - ವಿ० ನೇಮಕವಾದ.

**नियुक्ति** - ಸ್ತ್ರೀ० ನೇಮಕ; ನೇಮಣೂಕಿ.

**नियोग** - ಪುಂ० ನೇಮಕ; ನಿಶ್ಚಯ.

**नियोजक** - ಪುಂ० ನೇಮಕ ಮಾಡುವವ.

**नियोजन** - ಪುಂ० ನೇಮಕ; ನಿಯುಕ್ತಿ.

**निरंकुश** - ವಿ० ಪ್ರತಿಬಂಧಕವಿಲ್ಲದ; ನಿರ್ಭಯವಾದ.

**निरंतर** - ಕ್ರಿ० ಸದಾ; ಎಡಬಿಡದೆ

**निरक्षर** - ವಿ० ಓದು ಬರಹ ತಿಳಿಯದ.

**निरखना** - ಸ० ನೋಡು; ನಿರೀಕ್ಷಿಸು.

**निरचू** - ವಿ० ಯೋಚನೆಯಿಲ್ಲದ; ನಿಶ್ಚಿಂತೆಯ; ನೆಮ್ಮದಿಯಾದ.

**निरत** - ವಿ० ತತ್ಪರ; ಮಗ್ನ.

**निरधारना** - ಸ० ನಿಶ್ಚಯಿಸು; ನಿರ್ಧಾರಿಸು.

**निरन्न** - ವಿ० ಅನ್ನವಿಲ್ಲದ; ನಿರಾಹಾರ.

**निरपराध** - ವಿ० ನಿರ್ದೋಷಿ.

**निरपेक्ष** - ವಿ० ಬೇರೊಬ್ಬರನ್ನು ಅವಲಂಬಿಸದ; ತಟಸ್ಥ.

**निरपेक्षी** - ವಿ० ಬಯಸದ.

**निरबंसी** - ವಿ० ಸಂತಾನವಿಲ್ಲದ.

**निरभिमान** - ವಿ० ಅಹಂಕಾರವಿಲ್ಲದ.

**निरभ्र** - ವಿ० ಮೋಡವಿಲ್ಲದ.

**निरमना** - ಸ० ನಿರ್ಮಾಣಮಾಡು.

**निरर्थक** - ವಿ० ಅರ್ಥಶೂನ್ಯ; ಪ್ರಯೋಜನವಿಲ್ಲದ; ವ್ಯರ್ಥ.

निरवलंब - वि० ಆಧಾರವಿಲ್ಲದ.
निरवार - पु० ಬಿಡುಗಡೆ; ನಿವಾರಣೆ; ತಪ್ಪಿಸಿಕೊಳ್ಳುವುದು.
निरवारना - स० ತಳ್ಳು; ದೂಡು; ತೊಲಗಿಸು; ಬಿಡಿಸು.
निरशन - पु० ಉಪವಾಸ.
निरस - वि० ರಸಹೀನವಾದ; ಸಪ್ಪೆ; ನಿಸ್ಸಾರ.
निरस्त्र - वि० ಶಸ್ತ್ರವಿಲ್ಲದ.
निरा - वि० ಶುದ್ಧ; ಕೇವಲ; ಮಾತ್ರ; ಒರಿಯ.
निराई - स्त्री० ಕಳೆ ತೆಗೆಯುವುದು; ಕಳೆ ತಿಗೆಯುವುದರ ಕೂಲಿ.
निरादर - पु० ನಿರಾದರಣೆ; ಅವಮಾನ; ಅಮರ್ಯಾದೆ.
निराधार - वि० ಆಶ್ರಯ ಅಥವಾ ಆಧಾರವಿಲ್ಲದ.
निराना - स० ಕಳೆ ತೆಗಿ; ಕಳೆಕೀಳು
निरापद - वि० ಆಪತ್ತಿಲ್ಲದ; ಅನರ್ಥ ರಹಿತ.
निरामय - वि० ರೋಗವಿಲ್ಲದ.
निरामिष - वि० ಮಾಂಸಭಕ್ಷಣ ಮಾಡದ; ಸಸ್ಯಾಹಾರಿ.
निरारा - वि० ಬೇರೆ; ಪ್ರತ್ಯೇಕ.
निरालस्य - वि० ಸೋಮಾರಿತನವಿಲ್ಲದ; ಚುರುಕು.
निराला - पु० ಏಕಾಂತಸ್ಥಾನ वि० ಅದ್ಭುತ; ವಿಲಕ್ಷಣ; ಏಕಾಂತ.
निरावना - स० दे० निराना.
निराश - वि० ನಿರಾಶೆಯಾದ; ಹತಾಶ.
निराशा - स्त्री० ನಿರಾಶೆ; ಆಶಾಭಂಗ.
निराश्रय - वि० ಆಶ್ರಯವಿಲ್ಲದ.
निरीक्षक - पु० ನೋಡತಕ್ಕವನು; ಮೇಲ್ವಿಚಾರಕ.
निरीक्षण - पु० } ನೋಡಿಕೊಳ್ಳುವಿಕೆ;
निरीक्षा - स्त्री० } ಮೇಲ್ವಿಚಾರಣೆ.
निरीह - वि० ಯಾವ ವಿಷಯಕ್ಕಾಗಿಯೂ ಪ್ರಯತ್ನಿಸದ; ತಟಸ್ಥ; ಶಾಂತಿಪ್ರಿಯ.
निरुद्यम - वि० ಉದ್ಯೋಗವಿಲ್ಲದ.
निरुपम - वि० ಉಪಮೆಯಿಲ್ಲದ.
निरुपाय - वि० ದಿಕ್ಕಿಲ್ಲದ; ನಿರ್ವಾಹವಿಲ್ಲದ.
निरूपण - वि० ವಿವೇಚನೆ; ನಿರ್ಣಯ; ನಿದರ್ಶನ.
निरोग - वि० ಆರೋಗ್ಯವಾದ; ರೋಗರಹಿತವಾದ.
निरोध } पु० ತಡೆ; ಅಡ್ಡಿ; ಪ್ರತಿ
निरोधन } ಬಂಧಕ.
निर्ख - पु० ದರ; ಧಾರಣೆ.
निर्खनामा - पु० ಧಾರಣೆಪಟ್ಟಿ; ನಿರಖುಪಟ್ಟಿ.
निर्खबंदी - स्त्री० ಪೇಟೆಯ ಧಾರಣೆಯನ್ನು ನಿಶ್ಚಯಿಸುವಿಕೆ.
निर्गंध - वि० ವಾಸನೆಯಿಲ್ಲದ.
निर्गम - पु० ಹೊರಡುವಿಕೆ.
निर्घोत - पु० ಬಿರುಗಾಳಿಯ ಶಬ್ದ.
निर्घृण - वि० ತುಚ್ಛವಾದ.
निर्जन - वि० ಯಾರೂ ಇಲ್ಲದ; ಜನರಹಿತವಾದ.

निर्जर - वि० ಎಂದಿಗೂ ಮುದಿತನ ವಿಲ್ಲದ.

निर्जीव - वि० ಪ್ರಾಣವಿಲ್ಲದ.

निर्झर - पु० ಜಲಸ್ರೋತ; ಝರಿ.

निर्णय - पु० ತೀರ್ಮಾನ; ನಿಶ್ಚಯ; ನಿಷ್ಕರ್ಷೆ.

निर्दयता - स्त्री० ಕ್ರೌರ್ಯ; ನಿರ್ದಯತೆ.

निर्दिष्ट - वि० ನಿಶ್ಚಯವಾಗಿರುವ; ಹೇಳಿ ತೋರಿಸಿದ; ನಮೂದಿಸಿದ.

निर्देश - पु० ಆದೇಶ; ಅಪ್ಪಣೆ; ಆಜ್ಞೆ: ಉಲ್ಲೇಖ; ಹೆಸರು.

निर्दोष - वि० ದೋಷರಹಿತ.

निर्धन - वि० ಬಡವ; ದರಿದ್ರ.

निर्धनता - स्त्री० ಬಡತನ.

निर्धार, निर्धारण - पु० ನಿಶ್ಚಯ; ತೀರ್ಮಾನ

निर्धारना - स० ನಿಶ್ಚಯಿಸು.

निर्निमित्त - क्रि० ಕಾರಣವಿಲ್ಲದೆ; ಅಕಾರಣ.

निर्निमेष - क्रि० ಎವೆಯಿಕ್ಕದೆ; ಒಂದೇಸಮನೆ.

निर्बंध - पु० ಅಡ್ಡಿ; ತಡ.

निर्बल - वि० ಬಲವಿಲ್ಲದ; ನಿಶ್ಶಕ್ತ.

निर्बलता - स्त्री० ಬಲಹೀನತೆ; ನಿಶ್ಶಕ್ತಿ.

निर्बोध - वि० ತಿಳಿವಳಿಕೆಯಿಲ್ಲದ; ಅರಿಯದ.

निर्भय - वि० ಭಯವಿಲ್ಲದ.

निर्भयता - स्त्री० ಭಯವಿಲ್ಲದಿರುವಿಕೆ.

निर्भर - वि० ತುಂಬಿದ; ಸೇರಿದ; ಆಶ್ರಿತ; ಅವಲಂಬಿತ.

निर्भीक - वि० ಭಯವಿಲ್ಲದ.

निर्भीकता - स्त्री० ಭಯವಿಲ್ಲದಿರುವಿಕೆ.

निर्मम - वि० ಮಮತೆಯಿಲ್ಲದ;

निर्मल - वि० ಕೊಳೆಯಿಲ್ಲದ; ಶುದ್ಧ.

निर्माण - पु० ರಚನೆ; ನಿರ್ಮಾಣ.

निर्माना - स० ನಿರ್ಮಿಸು; ರಚಿಸು.

निर्मूल - वि० ಬುಡವಿಲ್ಲದ; ಬುಡದೊಂದಿಗೆ ಕಿತ್ತುಹಾಕಿದ.

निर्यात - पु० ರಫ್ತುಮಾಡುವುದು.

निर्लज्ज - वि० ನಾಚಿಕೆಯಿಲ್ಲದ.

निर्लज्जता - स्त्री० ನಾಚಿಕೆಗೇಡಿತನ.

निर्वहना - अ० ನೆರವೇರು; ಸಾಗು.

निर्वाचक - पु० ಚುನಾಯಿಸುವವ.

निर्वाचन - पु० ಚುನಾವಣೆ; ಆರಿಸುವಿಕೆ.

निर्वाचित - वि० ಚುನಾಯಿಸಲ್ಪಟ್ಟ.

निर्वासन - पु० ಗಡೀಪಾರು; ದೇಶಭ್ರಷ್ಟಮಾಡುವಿಕೆ.

निर्वाह - पु० ನಿರ್ವಾಹ; ಪಾಲನೆ; ಪೂರೈಸುವಿಕೆ.

निर्वाहना - अ० ನಿರ್ವಹಿಸು; ನಿಭಾಯಿಸು.

निर्व्याज - वि० ನಿಷ್ಕಪಟವಾದ.

निर्विघ्न - वि० ಎಡರು ತೊಡರುಗಳಿಲ್ಲದ; ತಡೆಯಿಲ್ಲದ. क्रि० ತಡೆಯಿಲ್ಲದೆ.

निर्विवाद - वि० ಚರ್ಚಾಸ್ಪದವಲ್ಲದ; ಆಕ್ಷೇಪಣೆಯಿಲ್ಲದ.

**निर्वेद** - पुं॰ ಅನುತಾಪ; ಅವಮಾನ; ವೈರಾಗ್ಯ.

**निलहा** - वि॰ ನೀಲಿ ಬಣ್ಣದ; ನೀಲ.

**निलाम** - पुं॰ दे॰ **नीलाम.**

**निवाज** - वि॰ ದಯೆ ತೋರುವವನು.

**निवाजना** - स॰ ದಯೆತೋರು; ಕರುಣಿಸು.

**निवाज़िश** - स्त्री॰ ದಯೆ; ಕರುಣೆ.

**निवाड़ा** - पुं॰ ದೋಣಿ; ತೆಪ್ಪ.

**निवार** - स्त्री॰ ಅಗಲವಾದ ಲಾಡಿ; ಪಟ್ಟಿ.

**निवारण** - पुं॰ ಪರಿಹಾರ; ನಿವಾರಣೆ.

**निवारना** - स॰ ನಿವಾರಿಸು; ಪರಿಹರಿಸು.

**निवाला** - पुं॰ ತುತ್ತು; ಕವಳ.

**निवासी** - पुं॰ ವಾಸವಾಗಿರುವವ.

**निवेदक** - पुं॰ ಬೇಡುವವ; ಅರಿಕೆ ಮಾಡುವವ.

**निवेदन** - पुं॰ ಪ್ರಾರ್ಥನೆ; ಅರಿಕೆ.

**निवेदन-पत्र** - पुं॰ ಪ್ರಾರ್ಥನಾಪತ್ರ; ಅರ್ಜಿ.

**निवेरना** - स॰ ಪೂರೈಸು; ಮುಗಿಸು.

**निवेश** - पुं॰ ಮನೆ; ಶಿಬಿರ.

**निशंक** - वि॰ ನಿರ್ಭಯ.

**निशा** - स्त्री॰ ರಾತ್ರಿ; ಇರುಳು.

**निशा-ख़ातिर** - स्त्री॰ ತೃಪ್ತಿ; ಶಾಂತಿ.

**निशात** - स्त्री॰ ಆನಂದ; ಸಂತೋಷ.

**निशान** - पुं॰ ಗುರುತು; ಲಕ್ಷಣ; ಚಿನ್ಹೆ; ಬಾವುಟ.

**निशानची** - पुं॰ ಬಾವುಟಗಾರ.

**निशानदेही** - स्त्री॰ ಒಬ್ಬನನ್ನು ಇಂತಹವನೇ ಎಂದು ಗುರುತಿಸಿ ಹೇಳುವುದು.

**निशान-बरदार** - पुं॰ ಧ್ವಜಧಾರಿ; ಬಾವುಟಗಾರ.

**निशाना** - पुं॰ ಲಕ್ಷ್ಯ; ಗುರಿ; ಉದ್ದೇಶ;—**बांधना** - ಗುರಿಯಿಡು.

**निशानी** - स्त्री॰ ಜ್ಞಾಪಕಾರ್ಥವಾಗಿ ಕೊಟ್ಟ ಅಥವಾ ಏರ್ಪಡಿಸಿದ ವಸ್ತು; ಸ್ಮಾರಕ.

**निशास्ता** - पुं॰ ಗೋಧಿಯ ಅಂಬಲಿ; ಗಂಜಿ.

**निशीथ** - पुं॰ ಅರ್ಧರಾತ್ರಿ.

**निश्चय** - पुं॰ ಖಂಡಿತ; ನಿಶ್ಚಯ; ಖಾತ್ರಿ.

**निश्चल** - वि॰ ಅಲ್ಲಾಡದ; ಕದಲದ.

**निश्चलता** - स्त्री॰ ಕದಲದಿರುವಿಕೆ.

**निश्रेणी** - स्त्री॰ ಏಣಿ; ನಿಚ್ಚಣಿಗೆ; ಮುಕ್ತಿ.

**निश्शेष** - वि॰ ಶೇಷವಿಲ್ಲದ; ಪೂರ್ಣ.

**निषंग** - पुं॰ ಬತ್ತಳಿಕೆ; ಖಡ್ಗ.

**निषादी** - पुं॰ ಮಾವುತ.

**निषिद्ध** - वि॰ ನಿಷೇಧಿಸಲ್ಪಟ್ಟ; ಮಾಡಬಾರದ.

**निष्कर** - पुं॰ ಕಂದಾಯವಿಲ್ಲದ ಭೂಮಿ.

**निष्कर्ष** - पुं॰ ನಿಶ್ಚಯ; ಸಾರಾಂಶ.

**निष्क्रमण** - पुं॰ ಹೊರಡುವುದು.

**निष्काम** - वि॰ ಆಸಕ್ತಿ ಅಥವಾ ಅಭಿಲಾಷೆಯಿಲ್ಲದ.

**निष्कासन** - पुं० ಗಡೀಪಾರು.

**निष्ठुर** - वि० ಕಠೋರ; ಕ್ರೂರ; ನಿರ್ದಯ.

**निष्ठुरता** - स्त्री० ಕ್ರೂರತನ; ಕ್ರೌರ್ಯ.

**निष्णात** - वि० ನಿಪುಣ.

**निष्पत्ति** - स्त्री० ಸಮಾಪ್ತಿ; ಸಿದ್ಧಿ; ನಿರ್ವಾಹ.

**निष्फल** - वि० ನಿರರ್ಥಕ.

**निसक** - वि० ಅಶಕ್ತ.

**निसबत** - स्त्री० ಸಂಬಂಧ; ಲಗ್ನ ನಿಶ್ಚಯಮಾಡುವಿಕೆ; ತುಲನೆ.

**निसर्ग** - पुं० ಸ್ವಭಾವ; ರೂಪ.

**निसस** - वि० ಶ್ವಾಸರಹಿತ; ಚೇತನ ವಿಲ್ಲದ.

**निसा** - स्त्री० ತೃಪ್ತಿ; ಸಂತೋಷ.

**निसाद** - पुं० ಜಲಗಾರ; ತೋಟಿ.

**निसान** - पुं० ಗುರಿ.

**निसाब** - पुं० ಸಂಪತ್ತು; ಐಶ್ವರ್ಯ.

**निसार** - पुं० ಉತ್ಸರ್ಗ; ಅರ್ಪಣೆ.

**निसारना** - स० ಹೊರಗೆ ಹಾಕು.

**निसास** - पुं० ನಿಶ್ವಾಸ. वि० ಶ್ವಾಸೋಚ್ಛ್ವಾಸವಿಲ್ಲದ.

**निसासी** - वि० ಶ್ವಾಸಗತಿಯಿಲ್ಲದ.

**निसीठा** - पुं० ನಿಸ್ಸಾರವಾದ.

**निसीथ** - पुं० ಅರ್ಧರಾತ್ರಿ.

**निसेनी** - स्त्री० ಏಣಿ.

**निस्केवल** - वि० ಪರಿಶುದ್ಧವಾದ; ಮಿಶ್ರಣವಿಲ್ಲದ.

**निस्तब्ध** - वि० ಚೈತನ್ಯವಿಲ್ಲದ; ಸ್ತಬ್ಧವಾದ.

**निस्तरण** - पुं० ಬಿಡುಗಡೆ; ಉದ್ಧಾರ.

**निस्तरना** - अ० ಪಾರಾಗು; ಬಿಡುಗಡೆ ಹೊಂದು.

**निस्तार** - पुं० दे० **निस्तरण**.

**निस्तारण** - पुं० ಪಾರಾಗುವಿಕೆ; ಜಯಿಸುವಿಕೆ.

**निस्तारना** - अ० ಬಿಡುಗಡೆಮಾಡು; ಉದ್ಧಾರಮಾಡು.

**निस्पृह** - वि० ಲೋಭವಿಲ್ಲದ; ಅಭಿಲಾಷೆಯಿಲ್ಲದ

**निस्फ़** - वि० ಅರ್ಧಭಾಗ.

**निस्बत** - स्त्री० दे० **निसबत**.

**निस्संतान** - वि० ಮಕ್ಕಳು ಮರಿಗಳಿಲ್ಲದ.

**निस्संदेह** - क्रि० ಅವಶ್ಯವಾಗಿ.

**निस्सार** - वि० ಸಾರರಹಿತವಾದ.

**निस्सीम** - वि० ಬಹಳ ಹೆಚ್ಚು.

**निहंग** - पुं० ಮೋಸಳೆ. वि० ಒಬ್ಬಂಟಿ; **निहंगे-अजल** - ಯಮದೂತ.

**निहत** - वि० ಬಿಸಾಡಿದ; ಎಸೆದ; ನಷ್ಟವಾದ; ಕೊಲ್ಲಲ್ಪಟ್ಟ.

**निहत्था** - वि० ಶಸ್ತ್ರಹೀನ; ಬರಿಗೈಯವ; ದರಿದ್ರ.

**निहल** - पुं० ನದಿಯು ಹಿಮ್ಮೆಟ್ಟಿದುದರಿಂದ ತಲೆದೋರಿದ ಜಮೀನು.

**निहाँ** - वि० ಒಬ್ಬೊಬ್ಬರಿರುವ; ಗುಪ್ತ.

**निहाई** - स्त्री० ಅಕ್ಕಸಾಲೆಯ ಅಥವಾ ಕಮ್ಮಾರನ ಚಮ್ಮಟಿಯ ಅಡಿಗಲ್ಲು.

**निहाद** - स्त्री० ಅಸ್ತಿವಾರ; ಮೂಲ; ಮನಸ್ಸು; ಸ್ವಭಾವ.

**निहायत** - वि० ಬಹಳ; ಹೆಚ್ಚು.

**निहार** - पु० ಇಬ್ಬನಿ; ಹಿಮ.

**निहारना** - स० ನೋಡು; ಗಮನ ಕೊಟ್ಟು ನೋಡು.

**निहाल** - वि० ಎಲ್ಲಾ ರೀತಿಯಿಂದಲೂ ಸಂತುಷ್ಟ ಮತ್ತು ಪ್ರಸನ್ನನಾದವನು.

**निहालचा** - पु० ಮಕ್ಕಳನ್ನು ಮಲಗಿಸುವ ಚಿಕ್ಕ ಹಾಸಿಗೆ.

**निहाली** - स्त्री० ಹಾಸಿಗೆ; ಅಗಲವಾದ ದಿಂಬು; ತೃಪ್ತಿ.

**निहुरना** - स० ಬಗ್ಗು; ತಗ್ಗು.

**निहुराना** - स० ಬಗ್ಗಿಸು; ತಗ್ಗಿಸು.

**निहोरना** - स० ಪ್ರಾರ್ಥಿಸಿಕೊಳ್ಳು; ಬಿನ್ನವಿಸು; ವಿಜ್ಞಾಪಿಸಿಕೊಳ್ಳು.

**निहोरा** - पु० ಅನುಗ್ರಹ; ಉಪಕಾರ; ವಿನಂತಿ; ಬೇಡಿಕೆ; ಆಶ್ರಯ; ಭರವಸೆ.

**नींद** - स्त्री० ನಿದ್ದೆ; ನಿದ್ರೆ;—**खुलना** - ಎಚ್ಚರಾಗು;—**लगना** - ನಿದ್ದೆ ಹತ್ತು; — **हराम होना** - ನಿದ್ದೆ ಬಾರದಿರು.

**नींव** - स्त्री० ಅಸ್ತಿವಾರ.

**नीक** } **नीका** } वि० ಒಳ್ಳೆಯ; ಸುಂದರವಾದ; ಅನುಕೂಲ.

**नीके** - क्रि० ಚೆನ್ನಾಗಿ; ಒಳ್ಳೆಯ ರೀತಿಯಲ್ಲಿ

**नीचता** - स्त्री० ನೀಚತನ; ಕೆಟ್ಟ ಕೆಲಸ.

**नीचा** - वि० ನಿಮ್ನ; ಕೆಳಗಣ; ತಗ್ಗಿರುವ; —**दिखाना** - ಅಪಮಾನ ಪಡಿಸು.

**नीचाशय** - वि० ತುಚ್ಛವಾದ ವಿಚಾರವುಳ್ಳ.

**नीचे** - क्रि० ಕೆಳಗಡೆಗೆ; ತಳದಲ್ಲಿ.

**नीज़** - अव्य० ಮತ್ತು; ಸಹ.

**नीजू** - स्त्री० ನೀರು ಸೇದುವ ಹಗ್ಗ.

**नीठि** - स्त्री० ಅನಾಸಕ್ತಿ; ಅರುಚಿ. क्रि० ಹೇಗಾದರೂ; ಯಾವುದಾದರೊಂದು ರೀತಿಯಲ್ಲಿ.

**नीठो** - वि० ಅನಿಷ್ಟ; ಅಪ್ರಿಯವಾದ.

**नीड़** - पु० ವಾಸಿಸುವ ಅಥವಾ ಉಳಕೊಳ್ಳುವ ಸ್ಥಳ; ಹಕ್ಕಿಗಳಗೂಡು.

**नीति** - स्त्री० ವ್ಯವಹಾರದ ರೀತಿ; ಆಚಾರ ಪದ್ಧತಿ.

**नीदना** - स० ನಿಂದಿಸು.

**नीबू** - पु० ನಿಂಬೆ; ಲಿಂಬೆ.

**नीम** - पु० ಬೇವು; ಬೇವಿನ ಮರ. वि० ಅರ್ಧ; ಅರೆ;—**हकीम** - ಅರೆ ವೈದ್ಯ; ಅಳಲೇಕಾಯಿ ಪಂಡಿತ.

**नीमचा** - पु० ಚಿಕ್ಕ ಕಠಾರಿ; ಚಾಕು.

**नीमजाँ** } **नीमजान** } वि० ಅರೆಜೀವದ; ಮರಣಾವಸ್ಥೆಯಲ್ಲಿರುವ.

**नीमटर** - वि० ಅರ್ಧಓದಿದ.

**नीमन** - वि० ಸ್ವಸ್ಥ; ವಾಸಿ.

**नीम-निगाह** - स्त्री० ಅರೆ ನೋಟ.

**नीमरज़ा** - वि० ಸ್ವಲ್ಪ ಒಪ್ಪಿಗೆಯುಳ್ಳ; ಅರೆಮನಸ್ಸಿನ.

**नीमराज़ी** - वि० ಅರ್ಧಸಮ್ಮತವುಳ್ಳ.

**नीमरोज़** - पु० ಮಧ್ಯಾಹ್ನ; ನಡು ಹಗಲು.

**नीमास्तीन** - स्त्री० ಅರೆ ತೋಳಿನ ಜುಬ್ಬ.

**नीयत** - स्त्री० ಭಾವನೆ; ಇರಾದೆ; ಉದ್ದೇಶ್ಯ.

**नीर** - पु० ನೀರು; ದ್ರವಪದಾರ್ಥ.

**नीरस** - वि० ನಿಸ್ಸಾರವಾದ; ರಸ ವಿಲ್ಲದ.

**नीरोग** - वि० ಸ್ವಸ್ಥ; ರೋಗವಿಲ್ಲದ.

**नील** - वि० ನೀಲವರ್ಣದ; ಗಾಢ ವಾದ ಆಕಾಶಬಣ್ಣದ. पु० ನೀಲ ವರ್ಣ; ನೀಲಿ ಗಿಡ.

**नीलगाय** - स्त्री० ಒಂದುಬಗೆಯ ಜಿಂಕೆ.

**नीलम** - पु० ನೀಲಮಣಿ.

**नीला** - वि० ನೀಲ; ಆಕಾಶ ಬಣ್ಣದ.

**नीलाम** - पु० ಹರಾಜು; ಲಿಲಾವು.

**नीलामी** - वि० ಹರಾಜಿನಲ್ಲಿ ಕೊಂಡು ಕೊಂಡ.

**नीलिमा** - स्त्री० ನೀಲವರ್ಣ.

**नीलोफर** - पु० ಕನ್ನೈದಿಲೆ; ನೀಲ ಕಮಲ.

**नीव** - स्त्री० ತಳಹದಿ; ಪಾಯ; ಅಸ್ತಿವಾರ.

**नीवि, नीवी** स्त्री० ಸೀರೆಯ ಗಂಟು; ಸೀರೆ ನಿರಿಗೆ.

**नीहार** - पु० ಮಂಜು; ಇಬ್ಬನಿ.

**नीहारिका** - स्त्री० ಆಕಾಶಗಂಗೆ.

**नुक़ता** - पु० ಚುಕ್ಕೆ; ಬೊಟ್ಟು.

**नुक़ताचीन** - वि० ತಪ್ಪು ಹುಡುಕು ವವ; ಹುಳುಕು ಹುಡುಕುವವ; ಛಿದ್ರಾನ್ವೇಷಿ.

**नुक़ताचीनी** - स्त्री० ತಪ್ಪು ಹುಡುಕು ವಿಕೆ; ಹುಳುಕು ಹುಡುಕುವಿಕೆ.

**नुक़रा** - पु० ಬೆಳ್ಳಿ; ಬಿಳೀಬಣ್ಣ वि० ಬಿಳೀ ಬಣ್ಣದ.

**नुक़सान** - पु० ನಷ್ಟ; ಹಾನಿ.

**नुकीला** - वि० ಮೊನಚಾದ; ಚೂಪಾದ.

**नुक्कड़** - पु० ಮೊನೆ; ತುದಿ; ಕೊನೆ.

**नुक़्स** - पु० ದೋಷ.

**नुचना** - अ० ಪರಚು; ಕೆದರಲ್ಪಡು.

**नुचवाना** - स० **नोचना** ದ ಪ್ರೇರ ಣಾರ್ಥಕ ರೂಪ.

**नुजूम** - पु० ತಾರಾಗಣ; ನಕ್ಷತ್ರ ವಿದ್ಯೆ.

**नुजूमी** - पु० ಜ್ಯೋತಿಷ್ಕ.

**नुत्फ़ा** - पु० ವೀರ್ಯ; ಶುಕ್ಲ; ಸಂತಾನ; **—हराम** - ಜಾರ ಪುತ್ರ.

**नुदबा** - पु० ಮೃತ್ಯುಶೋಕ; ಯಾ ರಾದರೂ ಸತ್ತಾಗ ಅತ್ತು ಬಡಿದು ಕೊಳ್ಳುವ ಶಬ್ದ.

**नुनखरा** - वि० ಉಪ್ಪಿನ.

**नुमा** - वि० ಕಾಣುವ.

**नुमाइन्दा** - पु० ಕಂಡುಬರುವ; ಪ್ರತಿ ನಿಧಿ.

**नुमाइश** - स्त्री० ಪ್ರದರ್ಶನ.

**नुमाइशगाह** - **स्त्री०** ಪ್ರದರ್ಶನದ ಮನೆ; ಪ್ರದರ್ಶನಶಾಲೆ.

**नुमाइशी** - **वि०** ಕೇವಲ ನೋಡುವುದಕ್ಕೋಸ್ಕರವಾಗಿರುವ; ಆಡಂಬರದ; ತೋರಿಕೆಯ.

**नुमाई** - **स्त्री०** ತೋರಿಸುವಿಕೆ.

**नुमायाँ** - **वि०** ಕಾಣುವ; ಪ್ರತ್ಯಕ್ಷ.

**नुशूर** - **पु०** ದೇವರಮುಂದೆ ವಿಚಾರಣೆಗಾಗಿ ಮೃತರಾದವರು ಪುನಃ ಜೀವಂತರಾಗಿ ಎದ್ದುಬರುವ ದಿನ.

**नुसखा** - **पु०** ಚಿಟ್ಟಿ. (**नुस्खा**)

**नून** / **नूतन** - **वि०** ಹೊಸ; ಅಪೂರ್ವವಾದ.

**नूतनता** - **स्त्री०** ಹೊಸತನ; ನವೀನತೆ.

**नून** - **पु०** ಉಪ್ಪು.

**नूपुर** - **पु०** ಪೈಜಣ.

**नूर** - **पु०** ಜ್ಯೋತಿ; ಬೆಳಕು; ಕಾಂತಿ.

**नूरा** / **नूरानी** - **वि०** ಕಾಂತಿಯುಳ್ಳ; ಪ್ರಕಾಶಮಾನವಾದ.

**नृत्य** - **पु०** ನರ್ತನ.

**नृपति** - **पु०** ಅರಸ; ರಾಜ.

**नृशंस** - **वि०** ನಿರ್ದಯ.

**नेक** - **वि०** ಒಳ್ಳೆಯ; ಉತ್ತಮ; ಚೆನ್ನಾದ.

**नेकचलन** - **वि०** ಸದಾಚಾರಿ.

**नेकचलनी** - **स्त्री०** ಒಳ್ಳೆನಡತೆ; ಸದಾಚಾರ.

**नेकनाम** - **वि०** ಒಳ್ಳೆ ಹೆಸರಿನ.

**नेकनामी** - **स्त्री०** ಒಳ್ಳೆ ಹೆಸರು; ಕೀರ್ತಿ.

**नेकनीयकत** - **वि०** ಒಳ್ಳೆ ವಿಚಾರಗಳುಳ್ಳ; ಸದ್ಭಾವನೆಗಳುಳ್ಳ.

**नेकबख़्त** - **वि०** ಭಾಗ್ಯವಂತ; ಪುಣ್ಯವಂತ.

**नेकी** - **स्त्री०** ಕಲ್ಯಾಣ; ಹಿತ; ಒಳಿತು; **—बदी** - ಹಿತಾಹಿತ.

**नेग** - **पु०** ಮದುವೆಯಲ್ಲಿ ಪರಸ್ಪರ ಒಪ್ಪಿಸುವ ಕಾಣಿಕೆ.

**नेज़ा** - **पु०** ಭಲ್ಲೆ; ಭರ್ಚಿ; **—बरदार** - ಭಲ್ಲೆಗಾರ.

**नेटा** - **पु०** ಸಿಂಬಳ.

**नेड़े** - **क्रि०** ಸಮೀಪ; ಹತ್ತಿರ.

**नेत** - **पु०** ನಿಶ್ಚಯ; ಗೊತ್ತುವಳಿ; ವ್ಯವಸ್ಥೆ.

**नेता** - **पु०** ಮುಖಂಡ; ಮುಂದಾಳು.

**नेत्र** - **पु०** ಕಣ್ಣು.

**नेत्री** - **स्त्री०** ಮುಂದಾಳು (ಹೆಂಗಸು).

**नेनुआ** - **पु०** ತುಪ್ಪಹೀರೇಕಾಯಿ.

**नेपथ्य** - **पु०** ನಾಟಕ ಮಂದಿರದಲ್ಲಿ ವೇಷ ಹಾಕಿಕೊಳ್ಳಲು ಇರುವ ಕೋಣೆ; ಪರದೆಯ ತೆರೆ; ಮರೆ.

**नेफ़ा** - **पु०** ಷರಾಯಿಯಲ್ಲಿ ಲಾಡಿ ಪೋಣಿಸುವ ಭಾಗ.

**नेब** - **पु०** ಮಂತ್ರಿ; ದಿವಾನ.

**नेम** - **पु०** ಕಾಲ; ಸಮಯ; ನಿಯಮ; ರೀತಿ.

**नेमत** - **स्त्री०** ಅಪರೂಪವಾದ ವಸ್ತು; ಉತ್ತಮವಾದ ಊಟ.

नेमि - स्त्री० ಚಕ್ರದ ಪಟ್ಟೆ; ಭಾವಿಯ ಕಟ್ಟೆ.

नेरे - क्रि० ಸಮೀಪ; ನಿಕಟ; ಹತ್ತಿರ.

नेवछावर - स्त्री० ನಿವಾಳಿಸುವಿಕೆ.

नेवज - पु० ನೈವೇದ್ಯ.

नेवतना - स० ಔತಣ ಕೊಡುವುದು.

नेवता - पु० ನಿಮಂತ್ರಣ.

नेवर - पु० ನೂಪುರ. वि० ಕೆಟ್ಟ.

नेवला - पु० ಮುಂಗಸಿ.

नेवा - पु० ರೂಢಿ; ಗಾಡಿ.

नेवाज - वि० ದಯಾವಂತ.

नेवारना - स० ನಿವಾರಣೆಮಾಡು.

नेवारी - स्त्री० ಕಾಡುಮಲ್ಲಿಗೆ.

नेश - पु० ತುದಿ; ಚೇಳುಕೊಂಡಿ.

नेशाकर - पु० ತಬ್ಬು.

नेश्तर - पु० ಶಸ್ತ್ರಚಿಕಿತ್ಸೆಯಲ್ಲಿ ಉಪಯೋಗಿಸುವ ಆಯುಧ.

नेस - पु० ಕೋರೆ ಹಲ್ಲು.

नेस्त - वि० ಇಲ್ಲದುದು ;—नाबूद - ನಷ್ಟಭ್ರಷ್ಟ.

नेस्ति - स्त्री० ಅನಸ್ತಿತ್ವ; ಇಲ್ಲದಿರುವಿಕೆ; ನಾಶ.

नेह - पु० ಪ್ರೀತಿ; ಸ್ನೇಹ.

नेही - वि० ಪ್ರೀತಿಸುವವ.

नैक - वि० ಒಳ್ಳೆಯ; ಉತ್ತಮ.

नैचा - पु० ಹುಕ್ಕದ ಕೊಳವೆ.

नैनसुख - पु० ಒಂದು ಬಗೆಯ ಹೊಳಪಾದ ನೂಲಿನ ಬಟ್ಟೆ.

नैनू - पु० ಬುಟ್ಟ ಹೊಲೆದ ಅರಿವೆ; पु० ಬೆಣ್ಣೆ.

नैया - स्त्री० ದೋಣಿ.

नैरंग - पु० ಮೋಸ; ಗಾರುಡಿ ಕೆಲಸ.

नैसर्गिक - वि० ಪ್ರಾಕೃತಿಕ; ಸ್ವಾಭಾವಿಕ.

नैसा - वि० ಕೆಟ್ಟ; ಕೆಡುಕಾದ.

नैहर - पु० ತವರುಮನೆ.

नोक - स्त्री० ತುದಿ.

नोक-झोंक - स्त्री० ಶೃಂಗಾರ; ಸೊಗಸು; ಚುಚ್ಚುವ ಮಾತು.

नोक-दार - वि० ಮೊನೆಯುಳ್ಳ; ಚೂಪಾದ.

नोके-ज़बाँ - वि० ಕಂಠಸ್ಥವಾದ.

नोखा - वि० ಅದ್ಭುತ; ವಿಚಿತ್ರ.

नोच - स्त्री० ಕಸಿದುಕೊಳ್ಳುವ ಕಾರ್ಯ; ಲೂಟಿ; ಅಪಹರಣ.

नोचना - स० ಕೆರೆ; ಕೆದರು; ಕುಕ್ಕು.

नोन - पु० ಉಪ್ಪು.

नोनचा - पु० ಉಪ್ಪಿನಲ್ಲಿ ಹಾಕಿದ ಮಾವಿನ ಕಾಯಿಚೂರು.

नोना - पु० ಉಪ್ಪುಮಣ್ಣು; ಚವಳು ಮಣ್ಣು.

नोनिया - पु० ಉಪ್ಪು ಮಣ್ಣಿನಿಂದ ಉಪ್ಪು ತಯಾರಿಸುವ ಒಂದು ಜಾತಿ; ಉಪ್ಪಾರ.

नोनी - स्त्री० ಚವಳು ಮಣ್ಣು.

नोल - स्त्री० ಕೊಕ್ಕು.

नोश - वि० ಹೊಸದು; ಒಂಭತ್ತು; —फ़रमाना - ಊಟಮಾಡುವದು.

नौ - वि० ಹೊಸದು ; ಒಂಭತ್ತು ; —दो ग्यारह होना ಓಡಿಹೋಗು.

नौउम्र - वि० ಯುವಕ.

नौकर - पु० ಸೇವಕ ; ಆಳು.

नौकरशाही - स्त्री० ಅಧಿಕಾರಿಗಳು ನಡೆಸುವ ಪ್ರಭುತ್ವ ; ರಾಜಸೇವಕರು ನಡೆಸುವ ಆಳ್ವಿಕೆ.

नौकरानी - स्त्री० ದಾಸಿ ; ತೊತ್ತು.

नौकरी - स्त्री० ಊಳಿಗ ; ಸೇವೆ ; ಉದ್ಯೋಗ.

नौका - स्त्री० ನೌಕೆ ; ದೋಣಿ.

नौज - अव्य० ದೇವರು ಕಾಪಾಡಲಿ; ದೋಷವಿಲ್ಲ.

नौजवान - वि० ನವಯುವಕ.

नौजवानी - स्त्री० ತಾರುಣ್ಯ.

नौज़ा - पु० ಬಾದಾಮಿ.

नौतम - वि० ತೀರ ಹೊಸದಾದ ; ಹಸನಾದ.

नौता - पु० ನಿಮಂತ್ರಣ ; ಔತಣ.

नौधा - पु० ಹೊಸತೋಟ; ಒಂಬತ್ತು ಬಗೆಯು.

नौना - अ० ಬಾಗು ; ಬಗ್ಗು.

नौनिहाल - पु० ಸಸಿ ; ನವಯುವಕ; ತರುಣ.

नौबत - स्त्री० ಬಾರಿ ; ಸಲ; ನಗಾರಿ.

नौबतख़ाना - पु० ನಗಾರಿ ಬಾರಿಸುವ ಸ್ಥಳ.

नौबती - पु० ನಗಾರಿ ಬಾರಿಸುವವ; ಸಿಂಗರಿಸಿದ ಕುದುರೆ ; ಡೇರೆ.

नौबहार - स्त्री० ವಸಂತ ಋತುವಿನ ಆಗಮನ.

नौरोज़ - पु० ಪಾರಸಿ ಜನರ ಯುಗಾದಿ ; ಆನಂದದ ದಿನ.

नौला - पु० ಮುಂಗುಸಿ.

नौलासी - वि० ಕೋಮಲ ; ಮೆತ್ತನೆಯ ; ಮೃದುವಾದ.

नौशा - पु० ಮದುಮಗ ; ವರ.

नौशी - स्त्री० ಮದುಮಗಳು; ಕನ್ಯೆ.

नौशेरवाँ - पु० ಇರಾನದ ಓರ್ವ ಪ್ರಸಿದ್ಧ ನ್ಯಾಯಾಧೀಶನೂ ಪ್ರತಾಪಿಯೂ ಆದ ಅರಸನು.

नौसत - पु० ಶೃಂಗಾರ; ಅಲಂಕಾರ.

नौसादर - पु० ನವಾಸಾಗರ.

नौसिख / नौसिखिया - वि० ಹೊಸದಾಗಿ ಕಲಿತವ.

नौसेना - स्त्री० ನೌಕಾ ಸೈನ್ಯ.

न्यारा - वि० ಬೇರೆ ; ಭಿನ್ನವಾದ ; ಅಸಾಧಾರಣ ; ವಿಚಿತ್ರ.

न्यारे - क्रि० ದೂರವಾಗಿ ; ಬೇರೆ.

न्याव - पु० ನ್ಯಾಯ ; ಕ್ರಮ.

न्यास - पु० ಇಡುವಿಕೆ; ಠೇವಣಾತಿ; ಅರ್ಪಣ.

न्यून - वि० ಸ್ವಲ್ಪ ; ಕೊರೆಯಾದ ; ಕಡಿಮೆ.

न्यूनता - स्त्री० ಕೊರತೆ ; ಕುಂದು.

न्योछावर - स्त्री० ದೃಷ್ಟಿ ಇಳಿತೆಗೆಯುವಿಕೆ.

न्योतनी - स्त्री० ಅನ್ನ ಸಂತರ್ಪಣೆ.

न्योतहरी - पु० ಆಮಂತ್ರಿಸಲ್ಪಟ್ಟ ಮನುಷ್ಯ.

न्योता - पु० ಔತಣ ; ನಿಮಂತ್ರಣ.

**न्योला** - **पुं०** ಮುಂಗುಸಿ.

**न्योली** - **स्त्री०** ನೀರಿನಿಂದ ಕರುಳನ್ನು ತೊಳೆಯುವ ಹಠಯೋಗದ ಒಂದು ಕ್ರಿಯೆ.

**न्हाना** - **अ०** ಸ್ನಾನಮಾಡು.

## प

**पंक** - **पुं०** ಕೆಸರು.

**पंकिल** - **वि०** ಕೆಸರುಳ್ಳ.

**पंक्ति** - **स्त्री०** ಸಾಲು; ವರಸೆ.

**पंख** - **पुं०** ರೆಕ್ಕೆ; ಪುಕ್ಕ.

**पंखी** - **पुं०** ರೆಕ್ಕೆ; ಪುಕ್ಕ; ಗರಿ; ಪಕ್ಷಿ. **वि०** ರೆಕ್ಕೆಯುಳ್ಳ.

**पंखड़ी** - **स्त्री०** ಹೂವಿನ ರೇಕು; ಎಸಳು.

**पंखा** - **पुं०** ಬೀಸಣಿಗೆ; ಪಂಖಾ.

**पंखी** - **पुं०** ಪಕ್ಷಿ; ಹಕ್ಕಿ. **स्त्री०** ಚಿಕ್ಕ ರೆಕ್ಕೆ.

**पंखुड़ा** - **पुं०** ಭುಜದ ಕೀಲು.

**पंखुड़ी** - **स्त्री०** ಹೂವಿನ ಎಸಳು.

**पंखेरू** - **पुं०** ಹಕ್ಕಿ, ಪಕ್ಷಿ.

**पंग** - **वि०** ಕುಂಟ.

**पंगत** / **पंगति** } **स्त्री०** ಸಾಲು; ಪಂಕ್ತಿ.

**पंगु** - **वि०** ಕುಂಟ.

**पंचक** - **पुं०** ಐದರ ಸಮೂಹ.

**पंचकनामा** - **पुं०** ಪಂಚಾಯಿತರು ತೀರ್ಮಾನ ಬರೆದಿರುವ ಕಾಗದ.

**पंचहज़ारी** - **पुं०** ಐದುಸಾವಿರ ಸೈನಿಕರುಳ್ಳ ಸೇನೆಯ ನಾಯಕ.

**पंचायत** - **स्त्री०** ಪಂಚಾಯಿತಿ.

**पंछा** - **पुं०** ಬೊಬ್ಬೆ, ಗುಳ್ಳೆ, ಮರ ಆದಿಗಳಿಂದ ಬಸಿಯುವನೀರು; ರಸಿಕೆ.

**पंछी** - **पुं०** ಪಕ್ಷಿ; ಹಕ್ಕಿ.

**पंजगोशा** - **वि०** ಐದು ಮೂಲೆಗಳುಳ್ಳ.

**पंजा** - **पुं०** ಐದರ ಸಮೂಹ; ಪಂಚಕ; ಕೈಕಾಲುಗಳ ಐದು ಬೆರಳುಗಳ ಸಮೂಹ; ಅಂಗೈ; ಹಿಡಿ; ಇಸ್ಪೀಟು ಐದನೆಯ ಬಂದು; ಮೊಹರಂ ಹಬ್ಬದಲ್ಲಿ ಮೆರವಣಿಗೆ ತೆಗೆದುಕೊಂಡು ಹೋಗುವ ಕೈ ಆಕಾರದ ರೇಕು.

**छक्का पंजा** - ಮೋಸ.

**पंजारा** - **पुं०** ಪಿಂಜಾರ.

**पंजी** - **स्त्री०** ಐದು ದೀಪಗಳು ಬೆಳಗುವ ಸೊಡರು.

**पंजीरी** - **स्त्री०** ಹಾಲು, ಸಕ್ಕರೆ, ರವೆ, ತುಪ್ಪಗಳಿಂದ ತಯಾರಿಸಿದ ಒಂದು ಮಿಠಾಯಿ.

**पंजेरा** - **पुं०** ಕಂಚುಗಾರ.

**पंडा** - **पुं०** ಪೂಜಾರಿ.

**पंडाल** - **पुं०** ಚಪ್ಪರ; ಮಂಟಪ.

**पंडिताऊ** - **वि०** ಪಾಂಡಿತ್ಯದ; ಪಂಡಿತರ.

**पंडितानी** - **स्त्री०** ಬ್ರಾಹ್ಮಣಸ್ತ್ರೀ.

**पंडु** - **वि०** ಬಿಳಿ.

**पंडुक** - **पुं०** ಕಾಡು ಪಾರಿವಾಳ.

**पंथ** - **पुं०** ದಾರಿ; ಮಾರ್ಗ; ಸಂಪ್ರದಾಯ.

**पंथी** - **पुं०** ಹಾದಿಗ; ದಾರಿಕಾರ; ಸಂಪ್ರದಾಯಸ್ಥ.

**पंद** - स्त्री० ಉಪದೇಶ; ಬುದ್ಧಿವಾದ.

**पंवरना** - अ० ಈಜು; ಆಳನೋಡು.

**पंवरि** - स्त्री० ಬಾಗಿಲು; ದ್ವಾರ.

**पंवरिया** - पु० ದ್ವಾರಪಾಲಕ.

**पंवाड़ा** - पु० ವೃತ್ತಾಂತ; ಕತೆ; ಕಗ್ಗ.

**पँसरहट्टा** - पु० ಪಂಸಾರಿ ಅಂಗಡಿಗಳ ಸಾಲು.

**पंसारी** - पु० ಕಿರಾಣಿ ಅಂಗಡಿಯುವ; ಗಂದಿಗೆ ಅಂಗಡಿಯುವ.

**पंसेरी** - स्त्री० ಐದು ಸೇರಿನ ತೂಕದ ಕಲ್ಲು.

**पकड़** - स्त्री० ಹಿಡಿತ; ಮುಷ್ಟಿ; ಪಟ್ಟು.

**पकड़ना** - स० ಹಿಡಿ.

**पकड़वाना**
**पकड़ाना** } स० ಹಿಡಿಸು.

**पकना** - अ० ಪಕ್ವವಾಗು; ಮಾಗು; ಕೂದಲು ನೆರೆಯು.

**पकवान** - पु० ಭಕ್ಷಣ; ಪಣ್ಯಾರ.

**पकाई** - स्त्री० ಅಡಿಗೆ; ಅಡಿಗೆಮಾಡಿದುದರ ಕೂಲಿ.

**पकौड़ा** - पु०
**पकौड़ी** - स्त्री० } ಪಕೋಡ.

**पक्का** - वि० ಬಲಿತ; ಮಾಗಿದ; ಅನುಭವವುಳ್ಳ.

**पक्ष** - पु० ಪಕ್ಕ; ಪಾರ್ಶ್ವ.

**पक्षाघात** - पु० ಪಾರ್ಶ್ವವಾಯು.

**पक्षी** - पु० ಹಕ್ಕಿ.

**पख** - स्त्री० ಜಗಳ.

**पखवारा** - पु० ಪಕ್ಷ; ಹದಿನೈದು ದಿನ.

**पख़** - स्त्री० ಮಲ; ಗಲಾಟೆ; ದುರ್ಭಾಷೆ.

**पखड़ी** - स्त्री० ಎಸಳು; ಹೂವಿನ ರೇಕು.

**पखान** - पु० ಕಲ್ಲು; ಬಂಡೆ.

**पखारना** - स० ತೊಳೆ; ಸ್ವಚ್ಛ ಮಾಡು.

**पखाल** - स्त्री० ಪಕಾಲಿ; ನೀರು ತುಂಬಲು ಮಾಡಿದ ಚರ್ಮದ ಚೀಲ.

**पखावज** - स्त्री० ಮೃದಂಗ; ಮದ್ದಳೆ.

**पखुड़ी**
**पखुरी** } स्त्री० दे० **पखड़ी**.

**पखेरू** - पु० ಪಕ್ಷಿ.

**पग** - पु० ಹೆಜ್ಜೆ; ಪಾದ; ಕಾಲು.

**पगडंडी** - स्त्री० ಕಾಲುದಾರಿ.

**पगड़ी** - स्त्री० ರುಮಾಲು; ಪಾಗು; ಪೇಟಾ.

**पगतरी** - स्त्री० ಮೆಟ್ಟು; ಪಾದರಕ್ಷೆ.

**पगना** - अ० ಪರಿಪಕ್ವವಾಗು; ಬೆರೆ; ಹೆಚ್ಚು ಅನುರಕ್ತವಾಗು.

**पगरा** - पु० ಹೆಜ್ಜೆ.

**पगला** - वि० ಹುಚ್ಚ.

**पगहा** - पु० ಕಣ್ಣೆ; ಹಗ್ಗ.

**पगा** - पु० ಶಾಲು; ಸೆಲ್ಲೆ; ಉಪ್ಪರಣಿ.

**पगाना** - स० ನೆನಸು; ಬೆರೆಸು; ಕೂಡಿಸು.

**पगार** - पु० ಆವರಣ ಗೋಡೆ; ಪ್ರಾಕಾರ; ವೇತನ.

**पगाह** - **स्त्री०** ಮುಂಜಾನೆ; ಪ್ರಾತಃ ಕಾಲ.

**पगुराना** - **अ०** ಮೆಲುಕಾಡಿಸು; ಮೆಲ್ಲು.

**पघा** - **पु०** ಕಣ್ಣಿ; ಪಶುಗಳ ಕೊರಳಲ್ಲಿ ಕಟ್ಟುವ ಹಗ್ಗ.

**पघिलना** - **अ०** ಕರಗು.

**पचकना** - **अ०** ಅದುಮಿ ಹೋಗು.

**पचड़ा** - **पु०** ತೊಂದರೆ; ಜಗಳ; ರಗಳೆ.

**पचना** - **अ०** ಜೀರ್ಣವಾಗು; ಕ್ಷಯವಾಗು.

**पचमेल** - **वि०** ಐದು ವಸ್ತುಗಳ ಸಮ್ಮಿಶ್ರಣದಿಂದಾದ ಪಂಚಗವ್ಯ; (ಪಂಚಾಮೃತ).

**पचाना** - **स०** ಜೀರ್ಣಿಸು; ಅರಗಿಸು.

**पचड़** - **पु०** / **पचर** - **स्त्री०** } ಬೆಣೆ; ಗೂಟ; ಆಪು.

**पची** - **स्त्री०** ಚೆನ್ನಾಗಿ ಬೆರತು ಹೋಗುವಿಕೆ.

**पचीकारी** - **स्त्री०** ಹುದುಗಿ ಕೂಡಿಸುವ ಕಾರ್ಯ.

**पच्छि** / **पच्छी** } **पु०** ಪಕ್ಷಿ.

**पछड़ना** - **अ०** ಕೆಳಕ್ಕೆ ಬೀಳು; ಹಿಂದುಳಿ.

**पछताना** - **अ०** ಪಶ್ಚಾತ್ತಾಪಪಡು.

**पछतावाँ** - **वि०** ಪಶ್ಚಾತ್ತಾಪ.

**पछवाँ** - **वि०** ಪಶ್ಚಿಮದ.

**पछाँह** - **पु०** ಪಶ್ಚಿಮ ಪ್ರದೇಶ.

**पछाँहिया** - **वि०** ಪಶ್ಚಿಮ ಪ್ರದೇಶದ.

**पछाड़ना** - **स०** ಹಿಂದಟ್ಟು; ಬಡಿ; ಅಪ್ಪಳಿಸು.

**पछाहीं** - **वि०** ಪಶ್ಚಿಮದೇಶದ.

**पछिआना** - **स०** ಹಿಂಬಾಲಿಸು; ಬೆನ್ನಟ್ಟು.

**पछितावा** - **पु०** ಪಶ್ಚಾತ್ತಾಪ.

**पछुवा** - **पु०** ಕಡಗ.

**पछोड़ना** - **स०** ಕೇರು; ಸಾಣಿಸು.

**पज़मुरदा** - **वि०** ಬಾಡಿದ; ಕಂದಿದ; ಸೊರಗಿದ.

**पजरना** - **अ०** ಉರಿ; ತಪಿಸು.

**पजामा** - **पु०** ಷರಾಯಿ.

**पजारना** - **स०** ಹೊತ್ತಿಸು; ಸುಡು.

**पजावा** - **पु०** ಭಟ್ಟಿ; ಉಬ್ಬೆ; ಆವಿಗೆ.

**पटंबर** - **पु०** ರೇಶ್ಮೆಯ ವಸ್ತ್ರ.

**पट** - **पु०** ವಸ್ತ್ರ; ಅರಿವೆ; ಪರದೆ; ಹಲಿಗೆ; ಬಾಗಿಲು; ಅರಳೆ; ಸಿಂಹಾಸನ.

**पटकन** - **स्त्री०** ಏಟು.

**पटकना** - **स०** ಎಸೆಯು; ಅಪ್ಪಳಿಸು.

**पटका** - **पु०** ಪಟ್ಟಿ; ಸೊಂಟಕ್ಕೆ ಕಟ್ಟುವ ವಸ್ತ್ರ.

**पटकार** - **वि०** ನೇಕಾರ; ಚಿತ್ರಕಾರ.

**पटड़ी** - **स्त्री०** ಮರದ ನೀಳವಾದ ತೀರು.

**पटतर** - **पु०** ಹೋಲಿಕೆ; ಸಮಾನತೆ; ಉಪಮೆ; ಬಯಲು; ಮೈದಾನ **वि०** ಸಮವಾದ; ಸಮತಲ.

**पटतरना** - **अ०** ಹೋಲು.

**पटना** - ಅಂ ಹೂಳು ತುಂಬು ; ಸಮತಲವಾಗು ; ಪರಿಪೂರ್ಣವಾಗು ; ಮನಸ್ಸು ಒಂದಾಗು.

**पटपर** - ವಿಂ ಎರಿಳಿತಗಳಿಲ್ಲದ; ಸಮನಾದ.

**पटबीजना** - ಪುಂ ಖದ್ಯೋತ; ಮಿಂಚುಹುಳ.

**पटरा** - ಪುಂ ಹಲಗೆ; ಮಣೆ; ಚಪ್ಪಡಿ ಕಲ್ಲು.

**पटरानी** - ಸ್ತ್ರೀಂ ಪಟ್ಟದರಸಿ ; ಪಟ್ಟದ ರಾಣಿ.

**पटरी** - ಸ್ತ್ರೀಂ ಹಲಗೆ ; ಕಪ್ಪುಹಲಗೆ ; ಪಾಟಿ ; ಅಂಚು.

**पटल** - ಪುಂ ಸಮೂಹ.

**पटली** - ಸ್ತ್ರೀಂ ಮಾಳಿಗೆ; ಚಪ್ಪರ.

**पटवाना** - ಸಂ ಹೊದಿಸು ; ಹಾಸು ; ಸಮತಲ ಮಾಡಿಸು; ತೀರಿಸು; ಸಮಾಧಾನ ಪಡಿಸು.

**पटवारी** - ಪುಂ ಕುಲಕರ್ಣಿ ; ಶಾನುಭೋಗ.

**पटवास** - ಪುಂ ವಸತಿಗೃಹ ; ಶಿಬಿರ.

**पटसन** - ಪುಂ ನಾರಿನಗಿಡ ; ಸೆಣಬು.

**पटहा** - ಪುಂ ನಗಾರಿ.

**पटहार** - ಪುಂ ಪಟ್ಟೆಗಾರ.

**पटा** - ಪುಂ ಆಸನ; ಪಟ್ಟಾ ಕತ್ತಿ, ಎಂಬ ಆಯುಧ.

**पटाई** - ಸ್ತ್ರೀಂ ಹೊಲಗದ್ದೆಗಳಿಗೆ ನೀರು ಬಿಡುವ ಕಾರ್ಯ.

**पटाका** / **पटाखा** - ಪುಂ ಬಾಣಬಿರುಸು.

**पटाना** - ಸಂ ಮುಚ್ಚಿಸು ; ಹೂಳು ; ತುಂಬು.

**पटिया** - ಸ್ತ್ರೀಂ ಹಾಸು ಕಲ್ಲು.

**पटीलना** - ಸಂ ಮೋಸಮಾಡುವುದು.

**पटु** - ವಿಂ ಪ್ರವೀಣ ; ಚತುರ ; ಧೂರ್ತ.

**पटुका** - ಪುಂ ವಸ್ತ್ರ ; ಸೆಲ್ಲೆ.

**पटुता** - ಸ್ತ್ರೀಂ ಪ್ರಾವೀಣ್ಯ.

**पटुवा** - ಪುಂ ಸೆಣಬು ; ನಾರು.

**पटेबाज़** - ಪುಂ ಪಟ್ಟಾವರಸೆ ಬಲ್ಲವ.

**पटेर** - ಪುಂ ನೀರಿನಲ್ಲಿ ಬೆಳೆವ ಹುಲ್ಲು.

**पटेल** - ಪುಂ ಹಳ್ಳಿಯ ಮುಖಂಡ ;

**पटोर** - ಪುಂ ರೇಶ್ಮೆ ವಸ್ತ್ರ ; ರೇಶ್ಮೆ ಸೀರೆ.

**पट्ट** - ಪುಂ ಮಣೆ; ಸಿಂಹಾಸನ; ಕಲ್ಲು.

**पट्टन** - ಪುಂ ಪಟ್ಟಣ ; ನಗರ.

**पट्टा** - ಪುಂ ಅಧಿಕಾರ ಪತ್ರ ; ಸನದು.

**पट्टी** - ಸ್ತ್ರೀಂ ಕಟ್ಟಿಗೆಯ ಹಲಗೆ ; ಸ್ಲೇಟು ; ಪಾಠ ; ಉಪದೇಶ ; ತಪ್ಪು ತಿಳುವಳಿಕೆ ; ಅರಿವೆಯ ಉದ್ದವಾದ ತುಂಡು ; ಭಾಗ ; **—पढ़ाना** - ಹೇಳಿಕೊಟ್ಟು ತನ್ನಂತೆಮಾಡಿಕೊಳ್ಳುವುದು.

**पट्टीदार** - ಪುಂ ಪಾಲುಗಾರ ; ಭಾಗದಾರ.

**पट्टू** - ಪುಂ ಒಂದು ಬಗೆಯ ಉಣ್ಣೆ ಬಟ್ಟೆ ; ಪಟ್ಟು.

**पट्ठेत** - ಪುಂ ಮೂರ್ಖ.

**पट्ठा** - ಪುಂ ಪ್ರಾಯಸ್ಥ ; ಬಲಿತ ಹುಡುಗ ; ತರುಣ ; ಮಲ್ಲ.

**पट्ठी** - **स्त्री०** ಬಲಿತ ಹುಡುಗಿ; ಮಲ್ಲಿ.

**पठन** - **पु०** ಓದುವುದು; ಓದುವಿಕೆ.

**पठनीय** - **वि०** ಓದಬೇಕಾದ.

**पठवाना** - **स०** ಕಳುಹಿಸು.

**पठान** - **पु०** ಪಠಾಣರು.

**पठाना** - **स०** ಕಳುಹಿಸು; ಕಳುಹು.

**पठानी** - **स्त्री०** ಪಠಾಣರ ಗುಣ; ಪಠಾಣರ ಹೆಂಗಸು.

**पठावन** - **पु०** ದೂತ.

**पठावनी** - **स्त्री०** ಕಳಿಸುವ ಕೆಲಸ ಅಥವಾ ಅದರ ಕೂಲಿ.

**पठित** - **वि०** ಓದಿದ; ಪಾಠವಾದ.

**पड़ता** - **पु०** ಮೂಲ ಬೆಲೆ; ಅಸಲು; ದರ.

**पड़ताल** - **पु०** ಪರಿಶೀಲನೆ; ಪರೀಕ್ಷಣ. (जाँच-पड़ताल)

**पड़तालना** - **स०** ಪರಿಶೋಧಿಸು; ಪರಿಶೀಲಿಸು.

**पड़ती** - **स्त्री०** ಪಡಬಿದ್ದ ಜಮೀನು; ಬಂಜರು.

**पड़ना** - **अ०** ಬೀಳು; ಒದಗು; ಸಂಭವಿಸು.

**पड़पड़ाना** - **अ०** ಹಾತೊರೆಯು.

**पड़पोता** - **पु०** ಮಗನ ಮೊಮ್ಮಗ.

**पड़वा** - **स्त्री०** ಪಾಡ್ಯಮಿ; ಪ್ರತಿಪತ್ತು.

**पड़ाव** - **पु०** ತಂಗುವ ಸ್ಥಳ; ಬೀಡು; ಪಾಳೆಯ.

**पड़िया** - **स्त्री०** ಎಮ್ಮೆಕರು.

**पड़ोस** - **पु०** ನೆರೆ; ಅಕ್ಕಪಕ್ಕ.

**पड़ोसिन** - **स्त्री०** ನೆರೆ ಮನೆಯವಳು.

**पड़ोसी** - **पु०** ನೆರೆಮನೆಯವ.

**पढ़ना** - **स०** ಓದು; ಕಲಿ; ಪಠಿಸು.

**पढ़वाना** - **स०** ಓದಿಸು; ಕಲಿಸು.

**पढ़ाई** - **स्त्री०** ಓದುವಿಕೆ; ಅಧ್ಯಯನ; ಅಧ್ಯಾಪನ; ಶಿಕ್ಷಣ.

**पढ़ाना** - **स०** ಓದಿಸು; ವಿದ್ಯೆಕಲಿಸು; ಪಾಠಹೇಳು.

**पढ़ा-लिखा** - **वि०** ಓದು ಬರಹ ತಿಳಿದವ; ವಿದ್ಯಾವಂತ.

**पण** - **पु०** ಪ್ರತಿಜ್ಞೆ; ಒಪ್ಪಂದ; ಪಂದ್ಯ.

**पण्य** - **वि०** ವ್ಯಾಪಾರಾರ್ಹವಾದ.

**पतंग** - **पु०** ದೀಪದ ಹುಳು; ಗಾಳಿಪಟ; ಪತಂಗ.

**पतंगबाज़** - **पु०** ಗಾಳಿಪಟ ಹಾರಿಸುವವ.

**पतंगा** - **पु०** ದೀಪದ ಹುಳು; ಪತಂಗ; ಕಿಡಿ.

**पत** - **पु०** ಒಡೆಯ; ಎಲೆ. **स्त्री०** ಮಾನ; ಗೌರವ.

**पतझड़**, **पतझर** - **स्त्री०** ಎಲೆಯುದುರುವ ಕಾಲ; ಶಶಿರಋತು.

**पतन** - **पु०** ಬೀಳುವಿಕೆ; ಅವನತಿ; ನಾಶ.

**पतनोन्मुख** - **वि०** ಬೀಳುತ್ತಿರುವ; ಪತನವಾಗುತ್ತಿರುವ.

**पत-पानी** - **पु०** ಮಾನ ಮರ್ಯಾದೆ; ಗೌರವ.

**पतला** - **वि०** ತೆಳ್ಳಗೆ; ಕೃಶವಾದ ಸೂಕ್ಷ್ಮ.

**पतलून** - पुं० ಇಜಾರು; ಷರಾಯಿ.

**पतवार** - स्त्री० ದೋಣಿಯ ಚುಕ್ಕಾಣಿ.

**पता** - पुं० ಪತ್ತೆ; ವಿಳಾಸ; ಗುರುತು; ಚಿನ್ಹೆ.

**पताका** - स्त्री० ಬಾವುಟ; ಧ್ವಜ.

**पताकिनी** - स्त्री० ಸೇನೆ.

**पति** - पुं० ಒಡೆಯ; ಯಜಮಾನ; ಗಂಡ.

**पतित** - वि० ಬಿದ್ದ.

**पतियाना** - स० ನಂಬು; ನೆಚ್ಚು.

**पतियारा** - पुं० ನಂಬಿಕೆ; ನೆಚ್ಚಿಕೆ.

**पतीजना** - अ० ನಂಬು.

**पतील** - पुं० ದೀಪದಬತ್ತಿ.

**पतीली** - स्त्री० ಚಿಕ್ಕತಪ್ಪಲೆ.

**पतुकी** - स्त्री० ಮಡಿಕೆ.

**पतुरिया** - स्त्री० ವೇಶ್ಯೆ; ಸೂಳೆ.

**पतोखा** - पुं० ದೊನ್ನೆ.

**पतोह, पतोहू** - स्त्री० ಸೊಸೆ.

**पत्तन** - पुं० ಪಟ್ಟಣ.

**पत्तर** - पुं० ತಗಡು.

**पत्तल** - स्त्री० ಊಟದೆಲೆ.

**पत्ता** - पुं० ಎಲೆ.

**पत्ती** - स्त्री० ಚಿಕ್ಕ ಎಲೆ; ಪಾಲು; ಹೂವಿನ ರೇಕು.

**पत्थर** - पुं० ಕಲ್ಲು; ಶಿಲೆ;—**का कलेजा** - ಕಲ್ಲೆದೆ;—**की लकीर** - ಯಾವಾಗಲೂ ಇರುವ; ಶಾಶ್ವತವಾದ;—**पड़ना** - ನಷ್ಟವಾಗು.

**पत्र** - पुं० ಎಲೆ; ಕಾಗದ.

**पत्रकार** - पुं० ಪತ್ರಿಕೆಯ ಸಂಪಾದಕ.

**पत्रवाहक** - पुं० ಓಲೆಕಾರ.

**पत्रव्यवहार** - पुं० ಉತ್ತರ ಮತ್ತು ಪ್ರತ್ಯುತ್ತರ ಬರೆಯುವುದು.

**पत्रा** - पुं० ಪಂಚಾಂಗ; ಹಾಳೆ.

**पत्री** - स्त्री० ಚಿಕ್ಕಪತ್ರ; ಪತ್ರಿಕೆ.

**पथ** - पुं० ದಾರಿ; ಮಾರ್ಗ.

**पथराना** - अ० ಒಣಗಿ ಬಿರುಸಾಗು; ಕಲ್ಲಾಗು.

**पथरी** - स्त्री० ಕಲ್ಲು ಮರಿಗೆ; ಸಾಣೆ ಕಲ್ಲು.

**पथरीला** - वि० ಕಲ್ಲುಗಳುಳ್ಳ; ಕಲ್ಲಿನ.

**पथिक** - पुं० ದಾರಿಗ; ಮಾರ್ಗಸ್ಥ.

**पद** - पुं० ಪದವಿ; ಅಂತಸ್ತು; ಪಾದ; ಚರಣ;—**चर** - ಕಾಲಾಳು.

**पदक** - पुं० ಪದಕ; ಮೆಡಲು.

**पदच्छेद** - पुं० ಶಬ್ದಗಳನ್ನು ಬಿಡಿಸುವುದು.

**पदच्युत** - वि० ಪದವಿಯಿಂದ ತೆಗೆಯಲ್ಪಟ್ಟ.

**पदत्राण** - पुं० ಕೆರ; ಎಕ್ಕಡ.

**पदवी** - स्त्री० ಬಿರದು; ಅಂತಸ್ತು.

**पदाधिकारी** - पुं० ಪದವೀಧರ; ಅಧಿಕಾರಸ್ಥ.

**पदाना** - स० ಪೀಡಿಸು; ಕಾಡು.

**पद्धति** - स्त्री० ರೂಢಿ; ವಾಡಿಕೆ.

**पद्मराग** - पुं० ಮಾಣಿಕ್ಯ.

**पधराना** - स० ಸ್ವಾಗತಿಸು.

**पधारना** - अ० ಆಗಮಿಸು; ದಯಮಾಡಿಸು.

**पन** - ಪು೦ ಪ್ರತಿಜ್ಞೆ; ಸಂಕಲ್ಪ. **प्रत्य०** ಭಾವವಾಚಕ ಪ್ರತ್ಯಯ; ಉದಾ: **पागलपन.**

**पनकुकड़ी** - ಸ್ತ್ರೀ೦ ನೀರು ಕೋಳಿ.

**पनघट** - ಪು೦ ಭಾವಿಕಟ್ಟೆ.

**पनच** - ಸ್ತ್ರೀ೦ ಹೆದೆ; ಬಿಲ್ಲಿನ ಹಗ್ಗ.

**पनचक्की** - ಸ್ತ್ರೀ೦ ನೀರಿನ ಯಂತ್ರ.

**पनडुब्बा** - ಪು೦ ನೀರಿನಲ್ಲಿ ಮುಳುಕ ಹಾಕುವವ; ಬುಡಗನ ಹಕ್ಕಿ.

**पनडुब्बी** - ಸ್ತ್ರೀ೦ ಸಮುದ್ರದಲ್ಲಿ ಮುಳಗಿ ಸಂಚರಿಸುವ ಹಡಗು; ಸಬ್‌ಮೆರೀನ್.

**पनपना** - ಅ೦ ಚಿಗುರು; ಅಂಕುರಿಸು; ಏಳಿಗೆಗೆ ಬರು.

**पनबट्टा** - ಪು೦ ವೀಳೇದೆಲೆಯ ಡಬ್ಬಿ.

**पनवाड़ी** - ಸ್ತ್ರೀ೦ ವಿಳೇದೆಲೆ ತೋಟ; ಎಲೆತೋಟ.

**पनवारा** - ಪು೦ ಊಟದೆಲೆ.

**पनस** - ಪು೦ ಹಲಸಿನಮರ; ಹಲಿಸಿನ ಹಣ್ಣು.

**पनसल्ला** - ಪು೦ **दे० पनसाल.**

**पनसारी** - ಪು೦ ಕಿರಾಣಿ ಅಂಗಡಿಯವ.

**पनसाल** - ಸ್ತ್ರೀ೦ ಅರವಟ್ಟಿಗೆ. (**प्याऊ**)

**पनहरा** - ಪು೦ ನೀರು ಹೊರುವವ; ನೀರಿನವ.

**पनहा** - ಪು೦ ಬಟ್ಟೆಯ ಪನ್ನ; ಗೋಡೆಯ ಅಗಲ; ಮರ್ಮ.

**पनहारा** - ಪು೦ **दे० पनहरा.**

**पनहारिन** - ಸ್ತ್ರೀ೦ ನೀರು ಹೊರುವವಳು.

**पनही** - ಸ್ತ್ರೀ೦ ಕೆರ; ಎಕ್ಕಡ; ಮೆಟ್ಟು.

**पनाला** - ಪು೦ ಕಾಲುವೆ; ಚರಂಡಿ.

**पनाह** - ಸ್ತ್ರೀ೦ ಶರಣ; ಮರೆ; ಆಶ್ರಯ.

**पनियाना** - ಸ೦ ನೀರುಹಾಯಿಸು; ನೀರು ಕಟ್ಟು.

**पनिहा** - ವಿ೦ ನೀರು ಸೇರಿದ; ನೀರಿನಲ್ಲಿರುವ.

**पनीर** - ಪು೦ ಹಾಲುಖೋವ; ಕೆನೆ.

**पनीरी** - ಸ್ತ್ರೀ೦ ನಾಟೀಹಾಕಲು ಪೈರು ತಯಾರಿಸುವ ಭೂಮಿ.

**पनीला** - ವಿ೦ ನೀರುಳ್ಳ.

**पन्ना** - ವಿ೦ ಹಾಳೆ; ಪುಟ; ಪಾನು; ಪಚ್ಚೆ.

**पन्नी** - ಸ್ತ್ರೀ೦ ಗುನ್ನಾಂಪಟ್ಟೆ; ವರಕು.

**पपड़ा** - ಪು೦ / **पपड़ी** - ಸ್ತ್ರೀ೦ } ಸಿಪ್ಪೆ; ತೊಗಟೆ; ಹುರುಕು.

**पपीता** - ಪು೦ ಪಪ್ಪಾಯಿ ಹಣ್ಣು; ಪರಂಗೀ ಹಣ್ಣು.

**पपीहरा** / **पपीहा** } ಪು೦ ಚಾತಕ ಪಕ್ಷಿ.

**पपोटा** - ಪು೦ ಕಣ್ಣು ರೆಪ್ಪೆ.

**पय** - ಪು೦ ಹಾಲು; ನೀರು.

**पयान** - ಪು೦ ಪ್ರಯಾಣ; ಯಾತ್ರೆ.

**पयाम** - ಪು೦ ಸಂದೇಶ.

**पयार** / **पयाल** } ಪು೦ ಒಣ ಹುಲ್ಲು.

**पयोज** - ಪು೦ ಕಮಲ.

**पयोद** - ಪು೦ ಮೇಘ.

**पयोधर** - ಪು೦ ಸ್ತನ; ಮೇಘ; ಕೊಳ; ಸಮುದ್ರ.

**पयोनिधि** - पु० ಸಮುದ್ರ.

**परंच** - अव्य० ಮತ್ತೂ; ಆದರೂ.

**परंतप** - वि० ಶತ್ರುಗಳನ್ನು ದುಃಖಕ್ಕೀಡುಮಾಡುವ.

**परंतु** - अव्य० ಆದರೆ.

**परंपरा** - स्त्री० ಕ್ರಮವಾಗಿ ಬಂದದ್ದು.

**परंदा** - पु० ಪಕ್ಷಿ.

**पर** - वि० ಪರ; ಇತರ; ಅನಂತರದ. अव्य० ಆದರೆ; ಪರಂತು; ಮೇಲೆ. पु० ರೆಕ್ಕೆ.

**परकना** - अ० ಅಭ್ಯಾಸವಾಗುವುದು.

**परकाजा** - वि० ಪರೋಪಕಾರಿ; ಲೋಕೋಪಕಾರಿ.

**परकार** / **परकाल** - पु० ಕೈವಾರ; ಕಂಪಾಸು.

**परकारना** - स० ಕೈವಾರದಿಂದ ವರ್ತುಲ ಬರೆ; ಸುತ್ತುಗಟ್ಟು.

**परकाला** - पु० ಏಣಿ; ನಿಚ್ಚಣಿಕೆ. **आफ़त का परकाला** - ಆಶ್ಚರ್ಯವನ್ನುಂಟುಮಾಡುವ; ಭಯಂಕರವಾದ.

**परकीय** - वि० ಇತರರ.

**परकोटा** - पु० ಸುತ್ತುಗೋಡೆ.

**परख** - स्त्री० ಪರೀಕ್ಷೆ; ಪರಿಶೋಧನೆ.

**परखना** - स० ಪರೀಕ್ಷಿಸು; ಪರಿಶೀಲಿಸು.

**परखाना** - स० ಪರೀಕ್ಷೆಮಾಡಿಸು.

**परगना** - पु० ಹೋಬಳಿ; ಪರಗಣೆ.

**परचा** - पु० ಚೀಟಿ; ಕಾಗದದ ತುಂಡು; ಪ್ರಶ್ನಪತ್ರ.

**परचाना** - स० ಸೇರಿಸು; ಆಕರ್ಷಿಸು.

**परचून** - पु० ಆಹಾರ ಪದಾರ್ಥಗಳು; ಅಕ್ಕಿಬೇಳೆ; ಕಾಳುಕಡಿ.

**परचूनी** - पु० ದಿನಸಿನ ಅಂಗಡಿಯವ.

**परछन** - पु० ನೀವಾಳಿಸುವಿಕೆ; ಆರತಿ.

**परछना** - स० ಇಳಿ ತೆಗೆ; ಆರತಿ ಎತ್ತು.

**परछाईं** - स्त्री० ಪ್ರತಿಬಿಂಬ; ನೆಳಲು.

**परजा** - स्त्री० ಪ್ರಜೆ.

**परतंत्र** - वि० ಪರಾಧೀನ; ಪರಾಶ್ರಿತ.

**परत** - स्त्री० ಪದರು; ಮಡಿಕೆ; ನಿರಿಗೆ.

**परती** - स्त्री० ಪಡ್ಡಬಿದ್ದ ಜಮೀನು; ಬಂಜರು.

**परथन** - पु० ರೊಟ್ಟಿ ಅಥವಾ ಹಪ್ಪಳ ಲಟ್ಟಿಸುವಾಗ ಉಪಯೋಗಿಸುವ ಹಿಟ್ಟು.

**परदा** - पु० ತೆರೆ; ತಡಿಕೆ; ಮರೆ; ಬುರುಕಿ;—**रखना** - ಮರೆಮಾಡು; **अक्ल पर परदा पड़ना** - ಮಂಕಾಗು, ತೋಚದಂತಾಗು.

**परदाज़** - पु० ಸಿಂಗಾರ; ಅಲಂಕಾರ.

**परदादा** - पु० ಮುತ್ತಜ್ಜ; ಮುತ್ತಾತ.

**परदादी** - स्त्री० ಮುತ್ತಜ್ಜಿ.

**परदा-नशीन** - वि० ಬುರಕಿ ಹಾಕಿದ; ಗೋಷಾ.

**परपट** - पु० ಸಮಭೂಮಿ; ಬಯಲು.

**परपराना** - ಅಂ ಉರಿ.

**परपोता** - ಪುಂ ಮರಿಮಗ.

**परबट्टा** - ಪುಂ ಎಲೆ ಅಡಿಕೆ ಇಡುವ ಡಬ್ಬಿ.

**परला** - ವಿಂ ಒಂದುತುದಿ ;—**परले दर्जे का, परले सिरे का** - ಅತ್ಯಧಿಕ.

**परवर** - ವಿಂ ಕಾಪಾಡುವ.

**परवरदा** - ವಿಂ ಬೆಳಸಿದ.

**परवरदिगार** - ಪುಂ ಸಂರಕ್ಷಕ; ಈಶ್ವರ.

**परवरिश** - ಸ್ತ್ರೀಂ ಪಾಲನೆ; ಪೋಷಣೆ; ಸಂರಕ್ಷಣೆ.

**परवल** - ಪುಂ ತೊಂಡೇಕಾಯಿ ಜಾತಿಯ ಒಂದು ತರಕಾರಿ. ಇದರಿಂದ ಪಲ್ಯೆಮಾಡುತ್ತಾರೆ.

**परवस्ती** - ಸ್ತ್ರೀಂ **दे॰ परवरिश.**

**परवा** - ಸ್ತ್ರೀಂ ಪಾಡ್ಯಮಿ ; ಚಿಂತೆ.

**परवाज़** - ಸ್ತ್ರೀಂ ಅಭ್ಯುದಯ; ಏಳಿಗೆ.

**परवानगी** - ಸ್ತ್ರೀಂ ಅನುಮತಿ ; ಅನುಜ್ಞೆ.

**परवाना** - ಪುಂ ಅನುಮತಿಯ ಪತ್ರ ; ದೀಪದ ಹುಳ; ಪತಂಗ.

**परवाह** - ಸ್ತ್ರೀಂ ಚಿಂತೆ ; ಪರವಾ.

**परवेज़** - ಪುಂ ಜಯಶಾಲಿ.

**परश** - ಪುಂ ಸ್ಪರ್ಶ.

**परशु** - ಪುಂ ಕೊಡಲಿ.

**परस** - ಪುಂ ಸ್ಪರ್ಶಮಣಿ.

**परसना** - ಸಂ ಮುಟ್ಟು; ಬಿಡಿಸು.

**परसाल** - ಪುಂ ಕಳೆದ ವರ್ಷ.

**परसों** - ಅವ್ಯಂ ನಾಡದ್ದು ; ಮೊನ್ನೆ.

**परस्त** - ವಿಂ ಪೂಜಿಸುವವ; ಉಪಾಸಕ.

**परस्तिश** - ಸ್ತ್ರೀಂ ಉಪಾಸನೆ; ಪೂಜೆ; ಪೂಜಕ.

**परहेज़** - ಪುಂ ಪಥ್ಯ ; ಸಂಯಮ.

**परहेज़गार** - ಪುಂ ಸಂಯಮಿ ; ಪಥ್ಯದಲ್ಲಿರುವವನು.

**पराँठा** - ಪುಂ ತುಪ್ಪ ಸವರಿ ಸುಟ್ಟ ಗೋಧಿ ರೊಟ್ಟಿ.

**परा** - ಪುಂ ಪಂಕ್ತಿ ; ಸಾಲು.

**पराकाष्ठा** - ಸ್ತ್ರೀಂ ಎಲ್ಲೆ.

**पराग** - ಪುಂ ಹೂವಿನ ಧೂಳು ; ಪರಾಗ.

**पराजय** - ಸ್ತ್ರೀಂ ಸೋಲು.

**पराजित** - ವಿಂ ಸೋಲಿಸಲ್ಪಟ್ಟ.

**परात** - ಸ್ತ್ರೀಂ ಹರಿವಾಣ ; ದೊಡ್ಡ ತಟ್ಟೆ.

**पराना** - ಅಂ ಓಡು; ಓಡಿಹೋಗು.

**पराभव** - ಪುಂ ಸೋಲು.

**परामर्श** - ಪುಂ ಆಲೋಚನೆ.

**पराया** - ವಿಂ ಹೆರರ ; ಅನ್ಯರ.

**परास्त** - ವಿಂ ಸೋತ.

**परिंद** / **परिंदा** - ಪುಂ ಹಕ್ಕಿ ; ಪಕ್ಷಿ.

**परिकर** - ಪುಂ ಮಂಚ.

**परिक्रमा** - ಸ್ತ್ರೀಂ ಪ್ರದಕ್ಷಿಣೆ.

**परिखन** - ವಿಂ ಕಾವಲುಗಾರಿಕೆಯು.

**परिखा** - ಸ್ತ್ರೀಂ ಕಂದಕ.

**परिगत** - ವಿಂ ಕಳೆದುಹೋದ; ಅರಿತ.

**परिग्रह** - पु० ಹಿಡಿದುಕೊಳ್ಳುವಿಕೆ; ಸ್ವೀಕಾರ.

**परिघ** - पु० ಸುತ್ತಿಗೆ; ಸಿಡಿಲು; ಮನೆ; ಬೆಟ್ಟ.

**परिचर** - पु० ಸೇವಕ.

**परिचरण** - पु० } ಸೇವೆ.
**परिचर्या** - स्त्री० }

**परिचायक** - पु० ಸೂಚಿಸುವವ; ತೋರಿಸುವವ.

**परिचार** - पु० ಸೇವೆ.

**परिचालन** - पु० ನಡೆಸುವುದು.

**परिचित** - वि० ಪರಿಚಯವುಳ್ಳ.

**परिच्छद** - पु० ಹೊದೆಯುವ ವಸ್ತ್ರ.

**परिच्छिन्न** - वि० ಎಲ್ಲೆಗೊಳಪಟ್ಟ.

**परिच्छेद** - पु० ಬಿರಿಕೆ; ಅಧ್ಯಾಯ.

**परिछाहीं** - स्त्री० ಪ್ರತಿಬಿಂಬ; ನೆರಳು.

**परिजन** - पु० ಪರಿವಾರ; ಸೇವಕ.

**परिज्ञान** - पु० ಪೂರ್ಣಜ್ಞಾನ.

**परिणत** - वि० ನಮ್ರ; ಬಗ್ಗಿದ; ಬದಲಾಯಿಸಲ್ಪಟ್ಟ.

**परिणति** - स्त्री० ಬದಲಾವಣೆ.

**परिणय** - पु० ಮದುವೆ.

**परित्याग** - पु० ಕೈಬಿಡುವಿಕೆ.

**परित्राण** - पु० ಸಂರಕ್ಷಣೆ.

**परिधान** - पु० ಉಡುಪು.

**परिधि** - स्त्री० ಸುತ್ತಳತೆ.

**परिपाटी** - स्त्री० ಸಂಪ್ರದಾಯ; ರೂಢಿ; ಮಾಮೂಲು.

**परिप्लुत** - वि० ಸರ್ವವಿಧದಲ್ಲೂ ತುಂಬಿದ.

**परिभव** } पु० ಅಪಮಾನ.
**परिभाव** }

**परिभाषा** - स्त्री० ಸ್ಪಷ್ಟವಾಗಿ ಹೇಳುವುದು; ಯಾವುದಾದರೊಂದು ವಸ್ತುವಿನ ಲಕ್ಷಣಗಳನ್ನು ಹೇಳುವುದು.

**परिभूत** - वि० ಸೋಲಿಸಲ್ಪಟ್ಟ.

**परिमल** - पु० ಸುವಾಸನೆ.

**परिमाण** - पु० ಅಳತೆ.

**परिमार्जन** - पु० ಚೆನ್ನಾಗಿ ತೊಳೆಯುವಿಕೆ; ಪರಿಶೋಧನೆ.

**परिमार्जित** - वि० ತೊಳೆಯಲ್ಪಟ್ಟ; ಪರಿಷ್ಕೃತ.

**परिमित** - वि० ಸ್ವಲ್ಪ; ಎಲ್ಲೆಗೊಳಗಾದ.

**परिमिति** - स्त्री० ಅಳತೆ.

**परिमेय** - वि० ಅಳೆಯಬಹುದಾದ.

**परिरंभ** } पु० ಆಲಿಂಗನೆ.
**परिरंभण** }

**परिवर्तन** - पु० ಬದಲಾವಣೆ; ತಿರುಗುವಿಕೆ.

**परिवा** - स्त्री० ಪಾಡ್ಯಮಿ.

**परिवार** - पु० ಕುಟುಂಬ; ಕುಲ.

**परिव्राजक** } पु० ಸಂನ್ಯಾಸಿ.
**परिव्राज** }

**परिशिष्ट** - पु० ಪುರವಣಿ; ಅನುಬಂಧ.

**परिश्रम** - पु० ಪ್ರಯಾಸ; ಶ್ರಮ.

**परिश्रमी** - वि० ಶ್ರಮಪಡುವವ.

**परिषद** - स्त्री० ಸಭೆ; ಸಮೂಹ. **पु०** ಸದಸ್ಯ.

**परिष्कार** - पुं० ಶುದ್ಧಿ; ಅಲಂಕಾರ.

**परिस्तान** - पुं० ಅಪ್ಸರೆಯರಿರುವ ಸ್ಥಳ.

**परिहास** - पुं० ಹಾಸ್ಯ; ವಿನೋದ; ಗೇಲಿ.

**परिहार** - पुं० ನಿವಾರಣೆ; ಹುಲ್ಲುಗಾವಲು.

**परिहार्य** - वि० ನಿವಾರಣೆಮಾಡಬಹುದಾದ.

**परी** - स्त्री० ಅಪ್ಸರೆ; ಚೆಲುವೆ.

**परीक्षक** - पुं० ಪರೀಕ್ಷಿಸುವವ.

**परीक्षा** - स्त्री० ಪರೀಕ್ಷೆ; ಪರಿಶೀಲನೆ.

**परीज़ाद** - वि० ಬಹಳ ಸುಂದರವಾದ.

**परीपैकर** - वि० ಅಪ್ಸರೆಯಂತೆ ಸುಂದರವಾದ.

**परीबन्द** - पुं० ಕಂಕಣ.

**परुष** - वि० ಕಠಿಣವಾದ; ಕೆಟ್ಟ; ನಿರ್ದಯ.

**परे** - क्रि० ಅತ್ತ; ಆಚೆ; ದೂರವಾಗಿ; ಮೇಲು.

**परेई** - स्त्री० ಪಾರಿವಾಳ.

**परेखना** - स० ನೋಡು; ಪರೀಕ್ಷಿಸು.

**परेता** - पुं० ನೂಲುಸುತ್ತುವ ಕೋಲು.

**परेवा** - पुं० ಪಾರಿವಾಳ; ಓಲೆಕಾರ.

**परेशान** - वि० ವಿಹ್ವಲ; ವ್ಯಗ್ರ; ಪೇಚಾಡುವ.

**परेशानी** - स्त्री० ಪೇಚಾಟ; ದಿಗಿಲು.

**परोसना** - स० ಬಡಿಸು.

**परोसा** - पुं० ಎಲೆಯಲ್ಲಿ ಬಡಿಸಿದ ಊಟ; ಬಡಿಸಿದ ಊಟದೆಲೆ.

**परौठा** - पुं० ತುಪ್ಪ ಸವರಿ ಬೇಯಿಸಿದ ಗೋಧಿಯ ರೊಟ್ಟಿ.

**परौहा** - पुं० ಕಪಿಲೆ ಬಾನೆ. **(मोट)**

**पर्जन्य** - पुं० ಮೇಘ.

**पर्ण** - पुं० ಎಲೆ; ಅಲದೆಲೆ.

**पर्त** - स्त्री० ಮಡತೆ; ಸುಕ್ಕು. **(परत)**

**पर्दा** - पुं० दे० परदा.

**पर्यंक** - पुं० ಮಂಚ.

**पर्यंत** - अ० ವರೆಗೆ; ತನಕ.

**पर्यटन** - पुं० ಸಂಚಾರ; ಪ್ರಯಾಣ.

**पर्यवसान** - पुं० ಕೊನೆ.

**पर्याप्त** - वि० ಸಾಕಾದ.

**पर्याय** - पुं० ಒಂದೇ ಅರ್ಥವನ್ನು ಕೊಡುವ ಶಬ್ದ.

**पर्यालोचना** - स्त्री० ಪೂರ್ಣವಾದ ವಿಚಾರಣೆ.

**पर्व** - पुं० ಪರ್ವಕಾಲ; ಪುಣ್ಯದಿನ.

**पर्वरिश** - स्त्री० ಪೋಷಣೆ; ಸಂರಕ್ಷಣೆ.

**पर्हेज़** - पुं० ನಿಯಮ.

**पलँगिया** - स्त्री० ಚಿಕ್ಕಮಂಚ.

**पल** - पुं० ವಿಘಟಿಕೆ; ಕ್ಷಣ; ಗಳಿಗೆ.

**पलक** - स्त्री० ಕ್ಷಣ; ಎವೆ; ಕಣ್ಣುರೆಪ್ಪೆ;—**बिछाना** - ಅತ್ಯಂತ ಪ್ರೀತಿಯಿಂದ ಬರಮಾಡಿಕೊಳ್ಳು; —**मारना** - ಕಣ್ಣಿನಿಂದ ಸನ್ನೆ ಮಾಡು;—**लगना** - ನಿದ್ರಿಸು.

पलकदरिया | पलकनेवाज़ - विಂ ದಾನಿ; ಮಹಾ ದಾನಿ.
पलका - पुಂ ಮಂಚ.
पलटन - स्त्रीಂ ಸೇನೆಯ ಒಂದು ಭಾಗ; ಪಡೆ.
पलटना - अಂ ಮೊಗುಚಿ ಬೀಳು; ಹೊರಳು; सಂ ಮೊಗುಚು; ಬೋರಲಿಸು.
पलटा - पुಂ ಹೊರಳು; ಬದಲು; ಪ್ರತಿಫಲ; ಪಲ್ಲಟ;—खाना - ಕಾಲ ಬದಲಾಯಿಸು;—लेना - ಸೇಡು ತೀರಿಸಿಕೊಳ್ಳು.
पलटाना - सಂ ತಿರುಗಿಸು; ಮೊಗುಚು.
पलड़ा - पुಂ ತಕ್ಕಡಿಯ ತಟ್ಟೆ.
पलथी - स्त्रीಂ ಚಕ್ಕಳ ಮುಕ್ಕಳಿ; —मारकर बैठना - ಚಕ್ಕ ಮುಕ್ಕಳಿ ಹಾಕಿಕೊಂಡು ಕೂಡು; ಪದ್ಮಾಸನದಲ್ಲಿ ಕೂಡು.
पलना - अಂ ಸಾಕಲ್ಪಡು; ಬೆಳೆ.
पलवाना - सಂ ಸಾಕು; ಸಲಹು.
पलस्तर - पुಂ ಗಾರೆ ಕೆಲಸ; ಗಚ್ಚು.
पलाना - अಂ ಓಡು; ಪಲಾಯನ ಮಾಡು. सಂ ಓಡಿಸು.
पलायन - पुಂ ಓಡಿಹೋಗುವಿಕೆ.
पलास - पुಂ ಪಲಾಶ; ಡೇಗೆ; ಮುತ್ತುಗದಗಿಡ; ಗೋಣೀಪಟ್ಟಿ.
पलित - विಂ ನರೆತುಹೋದ.
पली - स्त्रीಂ ಚಮಚ; ಮಿಳ್ಳೆ.
पलीता - पुಂ ಹರಕುಬಟ್ಟೆ; ಚಿಂದಿ.
पलीद - विಂ ಹೊಲಸು; ಹೇಯ.
पलुआ - पुಂ ಸಾಕಿದ ಪ್ರಾಣಿ.
पलोटना - सಂ ಮೆತ್ತಗೆ ತುಳಿ; ಮೆಟ್ಟು. अಂ ತಳಮಳಿಸು.
पल्लव - पुಂ ಚಿಗುರು; ತಳಿರು.
पल्ला - पुಂ ದೂರ; ಅಂಚು; ಸೆರಗು; ಮಡಿಕೆ; — छुड़ाना - ಬೆನ್ನು ಹತ್ತಿದವನ ಕೈಯಿಂದ ಬಿಡಿಸಿಕೊಳ್ಳು; हम पल्ला - ಸರಿಸಮಾನ; पल्ले पड़ना - ಹೊಂದುವುದು, ದೊರೆಯುವುದು;—झुकना या भारी होना - ಒಂದು ಪಕ್ಷದವರಿಗೆ ಶಕ್ತಿ ಹೆಚ್ಚಾಗುವುದು;—पसारना - ಬೇಡುವುದು; — बांधना - ಜವಾಬ್ದಾರಿ ಹೊರಿಸುವುದು ಅಥವಾ ಮದುವೆಯಾಗುವುದು.
पल्ली - स्त्रीಂ ಕುಗ್ರಾಮ; ಹಳ್ಳಿ.
पवनचक्की - स्त्रीಂ ಗಾಳಿಯ ಬಲದಿಂದ ತಿರುಗುವ ಯಂತ್ರ.
पवाड़ा - पुಂ ವೃತ್ತಾಂತ; ಕಥೆ; ಕಗ್ಗ.
पवाना - सಂ ತಿನ್ನಿಸು.
पवि - पुಂ ಮಿಂಚು.
पशम - पुಂ ಒಂದು ಬಗೆಯ ನಯವಾದ ಉಣ್ಣೆ; ತುಪ್ಪಟ.
पशमीना - पुಂ ನಯವಾದ ಉಣ್ಣೆಯಿಂದಮಾಡಿದ ಒಟ್ಟೆ.
पशुता - स्त्रीಂ ಮೃಗದ ಸ್ವಭಾವ.
पश्चात् - अव्यಂ ತರುವಾಯ, ನಂತರ.
पश्ता - पुಂ ದಡ. (किनारा)

**पश्म** - पुं० दे० **पशम.**

**पसंद** - वि० ಇಷ್ಟವಾದ; ಒಪ್ಪುವ.

**पसंदीदा** - वि० ಇಷ್ಟದ; ಮೆಚ್ಚಿಗೆಯ.

**पस** - क्रि० ಆದುದರಿಂದ; ಬಳಿಕ.

**पसर** - पुं० ಬೊಗಸೆ; ವಿಸ್ತಾರ.

**पसरना** - अ० ಹರಡು; ಕಾಲುಚಾಚಿಕೊಳ್ಳು.

**पसरहट्टा** - पुं० ಕಿರಾಣಿ ಅಂಗಡಿಗಳ ಬೀದಿ.

**पसली** - स्त्री० ಪಕ್ಕೆಲುಬು.

**पसाना** - स० ಗಂಜಿ ಬಸಿಯುವುದು. अ० ಸಂತೋಷಪಡುವುದು.

**पसारना** - स० ಹರಡು.

**पसाव** - पुं० ಗಂಜಿ.

**पसीजना** - अ० ಬೆವರು; ಕರಗು; ದ್ರವಿಸು.

**पसीना** - पुं० ಬೆವರು.

**पसेरी** - स्त्री० दे० **पंसेरी.**

**पसेव** - पुं० ರಸ; ಕಟ್ಟು.

**पसोपेश** - पुं० ಹಿಂದುಮುಂದೆ ನೋಡುವಿಕೆ; ಮೀನಮೇಷ.

**पस्त** - वि० ಸೋತ; ದಣಿದ.

**पस्त-हिम्मत** - वि० ಎದೆಗುಂದಿದ; ಧೈರ್ಯಗುಂದಿದ.

**पस्ती** - स्त्री० ತಗ್ಗು; ಕುಂದು; ಅಭಾವ.

**पहंसुल** - स्त्री० ಈಳಿಗೆ ಮಣೆ.

**पहचान** - स्त्री० ಗುರುತು; ಪರಿಚಯ.

**पहचानना** - स० ಗುರುತಿಸು.

**पहनना** - स० ಊಡು; ತೊಡು; ಧರಿಸು.

**पहनवाना** - स० **पहनाना** ದ ಪ್ರೇರಣಾರ್ಥಕರೂಪ.

**पहनाई** - स्त्री० ಉಡುವಿಕೆ.

**पहनाना** - स० ಉಡಿಸು; ತೊಡಿಸು.

**पहनावा** - पुं० ಉಡಿಗೆ; ತೊಡಿಗೆ; ಉಡುಪು.

**पहर** - पुं० ಜಾವ; ಮೂರು ಗಂಟೆಗಳ ಕಾಲ.

**पहरा** - पुं० ಕಾವಲು; ಪಹರೆ; ಸೆರೆ.

**पहराना** - स० दे० **पहनना.**

**पहरावनी** - स्त्री० ಬಟ್ಟೆ ಉಡಿಸುವವಳು; ಉಡುಗೊರೆ.

**पहरी** - पुं० ಪಹರೆಯುವ; ಕಾವಲುಗಾರ.

**पहल** - पुं० ಮಗ್ಗಲು; ಪಾರ್ಶ್ವ; ಪ್ರಾರಂಭ.

**पहलवान** - पुं० ಮಲ್ಲ; ಜಟ್ಟಿ.

**पहलवानी** - स्त्री० ಮಲ್ಲವಿದ್ಯೆ.

**पहला** - वि० ಮೊದಲನೆಯ; ಒಂದನೆಯ.

**पहलू** - पुं० ಮಗ್ಗಲು; ಪಾರ್ಶ್ವ; ಮುಖ; ರಹಸ್ಯ.

**पहलूदार** - वि० ಪಾರ್ಶ್ವಗಳಿರುವ.

**पहले** - अव्य० ಮೊದಲು; ಮುನ್ನ; ಪೂರ್ವದಲ್ಲಿ; **—पहल** - ಮೊಟ್ಟಮೊದಲು.

**पहलौटा** - वि० ಮೊದಲು ಹುಟ್ಟಿದ (ಮಗ); ಜ್ಯೇಷ್ಠಪುತ್ರ.

